೧೧



# ಸ್ವಾತಂತ್ರ್ಯ



ಮೋ.ಕ.ಗಾಂಧಿ

(ಗಾಂಧಿ ಸ್ಮಾರಕ ನಿಧಿ ಪ್ರಕಾಶನ)

ಪ್ರಥಮ ಮುದ್ರಣ
೫೦೦೦ ಪ್ರತಿಗಳು

ಸಂಪಾದಕ ಮಂಡಲ

ಪ್ರಿ. ರಾ. ಯ. ಧಾರವಾಡಕರ
(ಪ್ರಧಾನ ಸಂಪಾದಕ)
ಶ್ರೀ. ಬಿಂದುಮಾಧವ ಬುರ್ಲಿ
ಶ್ರೀ. ಎಸ್. ಎಸ್. ಒಡೆಯರ
ಪ್ರೊ. ಜಿ. ಡಿ. ನಾಡಕರ್ಣಿ
ಶ್ರೀ. ಎಂ. ಶಂಕರ
ಶ್ರೀ. ಜಿ. ಡಿ. ದೇಸಾಯಿ

ಅನುವಾದಕರು

ಶ್ರೀ. ಜಿ. ಆರ್. ಪಾಂಡೇಶ್ವರ

ಪ್ರಕಾಶಕರು

ಶ್ರೀ. ರಾ. ಶ್ರೀ. ಹುಕ್ಕೇರಿಕರ
ಅಧ್ಯಕ್ಷ, ಗಾಂಧಿಸ್ಮಾರಕ ನಿಧಿ, ಕರ್ನಾಟಕ ಶಾಖೆ.

ಮುದ್ರಕರು

ಎಂ. ಜಿ. ಪಾಲೇಕರ
ವಸಂತ ಮುದ್ರಣಾಲಯ, ಧಾರವಾಡ.

# ಮೊದಲ ಮಾತು

ಗಾಂಧೀಜಿ ಕುಳಿತಲ್ಲಿ ದೇವಮಂದಿರವಾಯಿತು; ನಡೆದಲ್ಲಿ ಪವಿತ್ರಭೂಮಿಯಾಯಿತು— ಎಂದು ಪಂಡಿತ ನೆಹರೂ ಅವರು ಹೇಳಿದರು. ಗಾಂಧೀಜಿಯವರ ಜೀವನಕಾಲದಲ್ಲಿ ಅವರ ಮಾರ್ಗದರ್ಶನದಲ್ಲಿ ಕೆಲಸವನ್ನು ಮಾಡುವ ಸೌಭಾಗ್ಯವು ಅನೇಕರಿಗೆ ಲಭಿಸಿತು. ಅವರ ವ್ಯಕ್ತಿತ್ವವು ತೋರಿದ ದಾರಿ-ಯನ್ನು ಇಂದು ನಾವು ಅವರ ಲೇಖನಗಳ ಮೂಲಕ ಕಂಡು-ಕೊಳ್ಳಬೇಕಾಗಿದೆ.

ಗಾಂಧೀಜಿಯವರ ವಿಚಾರಗಳನ್ನು ಈ ರೀತಿ ಜನತೆಯ ಮುಂದಿಡುವ ದೃಷ್ಟಿಯಿಂದ ಗಾಂಧಿಸ್ಮಾರಕನಿಧಿಯವರು ಬೇರೆ ಬೇರೆ ಭಾರತೀಯ ಭಾಷೆಗಳಲ್ಲಿ ಗಾಂಧಿಸಾಹಿತ್ಯವನ್ನು ಭಾಷಾಂತರಿಸಿ ಪೂರೈಸುತ್ತಿದ್ದಾರೆ. ಕನ್ನಡದಲ್ಲಿ ಈಗಾಗಲೇ ಇಂಥ ಅನೇಕ ಪ್ರೌಢ ಪ್ರಕಟನೆಗಳಾಗಿವೆ.

ಹೆಚ್ಚು ಸರಳವಾದ ಭಾಷೆಯಲ್ಲಿ ಗಾಂಧಿಸಾಹಿತ್ಯವನ್ನು ಒದಗಿಸುವ ದೃಷ್ಟಿಯಿಂದಲೂ, ಇಂಥ ಪ್ರಕಟನೆಗಳು ಹಣ ಮತ್ತು ಆಕಾರಗಳ ದೃಷ್ಟಿಯಿಂದ ಹೆಚ್ಚು ಸಂಗ್ರಹಾನುಕೂಲ ವಾಗಿರುವಂತೆಯೂ ಇನ್ನೂ ಎರಡು ಆಕಾರಗಳಲ್ಲಿ ಗಾಂಧಿ ಸಾಹಿತ್ಯವನ್ನು ಪ್ರಕಟಿಸುವುದೆಂದು ನಿರ್ಧರಿಸಿತು. ಈ ಗ್ರಂಥಗಳ ಉದ್ದೇಶ ಗಾಂಧಿತತ್ತ್ವಜ್ಞಾನ ಇಲ್ಲವೆ ಸಾಹಿತ್ಯದ ಮೌಲ್ಯಮಾಪನ ವಾಗಿರದೆ, ಭಿನ್ನ ಭಿನ್ನ ವಿಷಯಗಳ ಬಗೆಗೆ ಗಾಂಧೀಜಿಯವರು ಹೇಳಿದ ಮಾತುಗಳನ್ನು ತದ್ವತ್ತಾಗಿ ಭಾಷಾಂತರಿಸಿ ಕೊಡುವುದೇ ಆಗಿದೆ. ಪ್ರಸ್ತುತ ಗ್ರಂಥವು ಗಾಂಧೀಜಿಯವರು ಸ್ವಾತಂತ್ರ್ಯದ ವಿಷಯವಾಗಿ ಕಾಲಕಾಲಕ್ಕೆ ವ್ಯಕ್ತಮಾಡಿದ ವಿಚಾರಗಳ ಸಂಕಲನ ಮತ್ತು ಭಾಷಾಂತರ ಗ್ರಂಥವಾಗಿದೆ.

ಈ ಪ್ರಕಟನೆಗಳಲ್ಲಿಯ ಮೊದಲಿನ ಮಾಲಿಕೆಯಲ್ಲಿ ಹೆಚ್ಚು ಸರಳವಾದ ಪ್ರತಿಪಾದನೆಯ ಕಡೆಗೆ ಲಕ್ಷ್ಯವನ್ನು ಪೂರೈಸಿದ್ದರೆ, ಜೀವಿನಾವೃತ್ತಿಯಲ್ಲಿ ಆ ಆ ವಿಷಯಗಳ ಬಗೆಗೆ ಗಾಂಧಿ ವಿಚಾರ ಸಾರವು ನೆನಪಿನಲ್ಲಿ ಉಳಿಯುವಂತೆ ಸೂತ್ರಬದ್ಧವಾಗಿ ವಿಷಯಗಳನ್ನು ಕೊಡಲಾಗಿದೆ.

ಮೊದಲಿನ 'ಜನಪ್ರಿಯ' ಆವೃತ್ತಿಯಲ್ಲಿ ಈಗಾಗಲೇ "ಮಹಿಳೆಯರು" "ಒಳ್ಳೆಯ ಜೀವನ" "ಅಸ್ಪೃಶ್ಯತೆ" "ಸತ್ಯ" "ಸರ್ವೋದಯ" "ವಿದ್ಯಾರ್ಥಿಗಳು" "ಖಾದಿ–ಗ್ರಾಮೋದ್ಯೋಗ" "ನನ್ನ ಬಾಲ್ಯದ ನೆನಹುಗಳು" ಮತ್ತು "ಪ್ರಾರ್ಥನೆ" ಎಂಬ ಪುಸ್ತಕಗಳು ಪ್ರಕಟವಾಗಿವೆ.

ಶಿಕ್ಷಣ ಮತ್ತು ಇತರ ವಿಧಾಯಕ ಕಾರ್ಯಕ್ಷೇತ್ರಗಳಲ್ಲಿ ಇಂದು ಗಾಂಧಿವಿಚಾರದ ತಿಳಿವಳಿಕೆ ಮತ್ತು ಅನುಷ್ಠಾನದ ಆವಶ್ಯಕತೆ ಎಷ್ಟಿದೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಇಂಥ ವಿಚಾರಗಳಲ್ಲಿ ಆಸಕ್ತಿಯುಳ್ಳ ಶಿಕ್ಷಣ ಸಂಸ್ಥೆಗಳು, ವಯಸ್ಕರ ಶಿಕ್ಷಣ ಸಂಸ್ಥೆಗಳು, ಹಳ್ಳಿ ಮತ್ತು ಪಟ್ಟಣಗಳಲ್ಲಿಯ ವಾಚನಾಲಯಗಳು ಮತ್ತು ವಿಧಾಯಕ ಕಾರ್ಯಕರ್ತರು ಈ ಪ್ರಕಟನೆಗಳನ್ನು ಸ್ವಾಗತಿಸುವುದಾಗಿ ನಂಬಿದ್ದೇವೆ.

ಧಾರವಾಡ — ಡಾ. ಶ್ರೀ. ಹುಕ್ಕೇರೀಕರ

[illegible] — ಅಧ್ಯಕ್ಷ

[illegible] — [illegible]

---

# ಸ್ವಾತಂತ್ರ್ಯ

## ಭಾರತದ ಸ್ವಾತಂತ್ರ್ಯ

ನನಗೆ ನನ್ನ ದೇಶದ ಸ್ವಾತಂತ್ರ್ಯ ಬೇಕು. ಅದರಿಂದ ಅನ್ಯರಾಷ್ಟ್ರಗಳು ಕಲಿತುಕೊಳ್ಳುವಂತಾಗಬೇಕು. ನನ್ನ ದೇಶದ ಸಂಪತ್ತನ್ನು ಮಾನವ ಕೋಟಿಯ ಹಿತಕ್ಕಾಗಿ ಉಪಯೋಗಿಸು-ವಂತಾಗಬೇಕು.

ವ್ಯಕ್ತಿಯು ಕುಟುಂಬಕ್ಕಾಗಿ, ಕುಟುಂಬವು ಗ್ರಾಮಕ್ಕಾಗಿ, ಗ್ರಾಮವು ಜಿಲ್ಲೆಗಾಗಿ, ಜಿಲ್ಲೆಯು ಪ್ರಾಂತ್ಯಕ್ಕಾಗಿ ಮತ್ತು ಪ್ರಾಂತ್ಯವು ದೇಶಕ್ಕಾಗಿ ಪ್ರಾಣಾರ್ಪಣ ಮಾಡಲು ಸಿದ್ಧವಾಗಿರ-ಬೇಕೆಂಬ ತತ್ತ್ವವನ್ನು ಸ್ವದೇಶ ಭಕ್ತಿಯು ಹೇಗೆ ಕಲಿಸುವುದೋ ಹಾಗೆ ಒಂದು ದೇಶವು, ಅವಶ್ಯಬಿದ್ದರೆ, ಇಡೀ ಜಗತ್ತಿನ ಹಿತ-ಕ್ಕಾಗಿ ಸಾಯಲು ಸಿದ್ಧವಾಗಲಿಕ್ಕಾಗಿಯೇ ಅದು ಸ್ವತಂತ್ರ-ವಾಗಿರಬೇಕು ಆದ್ದರಿಂದಲೇ ನಾನು ರಾಷ್ಟ್ರೀಯತೆಯನ್ನು ಪ್ರೀತಿಸುತ್ತಿದ್ದೇನೆ. ನನ್ನ ದೇಶವು ಸ್ವತಂತ್ರವಾಗಿ, ಅವಶ್ಯಬಿದ್ದರೆ

ಮಾನವ ಜನಾಂಗದ ಉಳಿವಿಗಾಗಿ ತನ್ನನ್ನು ಬಲಿಕೊಡಲಿಕ್ಕೂ ಸಿದ್ಧವಾಗಿರಬೇಕೆಂಬುದೇ ನನ್ನ ರಾಷ್ಟ್ರೀಯತೆಯ ಕಲ್ಪನೆಯಾಗಿದೆ. ಅದರಲ್ಲಿ ವರ್ಣದ್ವೇಷ, ಕುಲದ್ವೇಷಗಳಿಗೆ ಸ್ಥಾನವಿಲ್ಲ. ಅದೇ ನಮ್ಮ ರಾಷ್ಟ್ರೀಯತೆಯಾಗಿರಲಿ.

(ಯ. ಇ. ೧೯೨೧)

---

# ಮಾನವಲೋಕಕ್ಕೇ ಹೊಸ ಸಂದೇಶ

ಯುರೋಪಿಗೆ ಸಾಷ್ಟಾಂಗ ನಮಸ್ಕಾರ ಹಾಕುವ ಭಾರತವು ಮಾನವಲೋಕಕ್ಕೆ ಯಾವ ಆಶಾದಾಯಕ ಸಂದೇಶವನ್ನೂ ಕೊಡಲಾರದು. ಎಚ್ಚೆತ್ತು ಸ್ವತಂತ್ರವಾದ ಭಾರತವು ನೋವಿನಿಂದ ನರಳುತ್ತಿರುವ ಜಗತ್ತಿಗೆ ಶಾಂತಿ ಸೌಹಾರ್ದತೆಯ ಸಂದೇಶವನ್ನುಕೊಡಬಲ್ಲದು.

× × ×

ಮಾನವಲೋಕದ ಸಲುವಾಗಿ ಪ್ರಾಣಾರ್ಪಣಮಾಡಲು ಮುಂದಾಗುವಂತೆ, ಭಾರತವು ಮೊತ್ತಮೊದಲು ತಾನು ಬರುವಂತಾಗಬೇಕು. ಸ್ವತಂತ್ರ ಭಾರತವು ಮಾನವ ಜಗತ್ತಿನ ಹಿತದ ಸಲುವಾಗಿ ತಾನಾಗಿಯೇ ತನ್ನನ್ನೊಂದು ಪವಿತ್ರವಾದ ಬಲಿಯನ್ನಾಗಿ ಅರ್ಪಿಸುವುದನ್ನು ನಾನು ನೋಡಲಿಚ್ಛಿಸುತ್ತೇನೆ.

× + ×

ಭಾರತದ ಸ್ವಾತಂತ್ರ್ಯವು ಶಾಂತಿ ಮತ್ತು ಸಮರದ ಬಗೆಗೆ ಜಗತ್ತಿನ ಅಭಿಪ್ರಾಯದಲ್ಲಿಯೇ ಒಂದು ಕ್ರಾಂತಿಯನ್ನುಂಟುಮಾಡಬೇಕು. ಭಾರತದ ಅಸಹಾಯ ಸ್ಥಿತಿಯು ಮಾನವಲೋಕದ ಮೇಲೆ ಪರಿಣಾಮಮಾಡದೇ ಇರುವದಿಲ್ಲ.

× × ×

ನನ್ನ ಆಕಾಂಕ್ಷೆಯು ಸ್ವಾತಂತ್ರ್ಯಕ್ಕಿಂತಲೂ ಮೇಲಿನದಾಗಿದೆ. ಭಾರತದ ವಿಮೋಚನೆಯಮೂಲಕ ನಾನು ಪಾಶ್ಚಿಮಾತ್ಯರ ಶೋಷಣೆಯಿಂದ ತುಳಿಯಲ್ಪಟ್ಟಿರುವ ಎಲ್ಲ ದುರ್ಬಲ ಜನಾಂಗಗಳನ್ನೂ ಗುಲಾಮಗಿರಿಯಿಂದ ಬಿಡುಗಡೆಮಾಡಲು ಹಾದಿಕಾಯುತ್ತಿದ್ದೇನೆ.

(ದಿ ಮೈಂಡ್ ಆಫ್ ಮಹಾತ್ಮಾ ಗಾಂಧಿ ಪು. ೧೬೮–೧೬೯)

---

# ಭಾರತದ ಸ್ವಾತಂತ್ರ್ಯಕ್ಕೆ ಯಾರೂ ಅಂಜಬೇಕಿಲ್ಲ

ಸ್ವತಂತ್ರ ಭಾರತದಲ್ಲಿ ತಮ್ಮ ಪರಿಸ್ಥಿತಿ ಹೇಗಾಗುವುದೋ ಎಂಬುವ ಜನರನ್ನು ಕಂಡು ನನಗೆ ನೋವೂ ಆಶ್ಚರ್ಯವೂ ಆಗುತ್ತದೆ. ನನ್ನಮಟ್ಟಿಗೆ ಹೇಳುವುದಾದರೆ, ಭಾರತದ ಕೃತ್ರಿಮ ಗಡಿಯೊಳಗಷ್ಟೇ ಅಲ್ಲದೆ ಅದರ ಪ್ರಾಕೃತಿಕ ಗಡಿಯೊಳಗೆ ಜನಿಸಿರುವ ಅತ್ಯಂತ ಕೆಳತರಗತಿಯ ವ್ಯಕ್ತಿಗೂ ಸ್ವಾತಂತ್ರ್ಯವನ್ನು ಕೊಡದಿದ್ದರೆ, ನನಗದು ಭಾರತದ ಸ್ವಾತಂತ್ರ್ಯವೆನಿಸಲಾರದು. ಭಯವು ಶಕ್ತಿಯನ್ನು ಉಡುಗಿಸುತ್ತದೆ... ಶೋಷಕರು, ಹಣಸುಲಿಯುವವರು, ದರೋಡೆಖೋರರು ಮತ್ತು ಅವರಂಥ ಇತರ ಜನರು ಮಾತ್ರವೇ ಭಾರತದ ಸ್ವಾತಂತ್ರ್ಯದ ಬಗ್ಗೆ ಭಯ ಪಡುವರು.

ನಾನು ಬಹು ವಿನಯಪೂರ್ವಕವಾಗಿ ಸೂಚಿಸುವುದೇನೆಂದರೆ:—ಭಾರತವು ಸತ್ಯ ಮತ್ತು ಅಹಿಂಸೆಯಿಂದ ಸ್ವಾತಂತ್ರ್ಯವನ್ನು ಪಡೆದರೆ, ಅದು ಶಾಂತಿಗಾಗಿ ಪರಿತಪಿಸುತ್ತಿರುವ ಇಡೀ ಜಗತ್ತಿಗೇ ದೊಡ್ಡದೊಂದು ಕೊಡುಗೆಯನ್ನು ಕೊಟ್ಟಂತಾಗುವುದು. ಹಾಗೂ, ಅದರಿಂದ ಭಾರತವು ಅನ್ಯ ಜನಾಂಗಗಳಿಂದ ಪಡೆದ ಸಹಾಯಕ್ಕೆ ತುಸುವಾದರೂ ಪ್ರತಿಯಾಗಿ ಸಹಾಯ ಸಲ್ಲಿಸಿದಂತಾಗುವುದು.

(ಮೈಂಡ್ ಆಫ್ ಮಹಾತ್ಮಾ ಗಾಂಧಿ ಪು. ೧೨೦)

---

# ಸ್ವತಂತ್ರ ಭಾರತದ ಘಟನೆ

ಸ್ವರಾಜ್ಯವೆಂದರೆ, ಶರೀರಶ್ರಮದಿಂದ ರಾಷ್ಟ್ರಕ್ಕೆ ಸೇವೆ ಸಲ್ಲಿಸುತ್ತಿರುವ ಹಾಗೂ ತಮ್ಮ ಹೆಸರುಗಳನ್ನು ಮತದಾರರ ಯಾದಿಗಳಲ್ಲಿ ನೊಂದಾಯಿಸಿಕೊಂಡಿರುವ, ಸಕಲ ಪ್ರೌಢ ಸ್ತ್ರೀ-ಪುರುಷರ ಬಹುಮತಾಭಿಪ್ರಾಯದಂತೆ ನಡೆದುಕೊಳ್ಳುವ ಸರಕಾರ. ಕೆಲವೇ ಜನರ ಕೈಯಲ್ಲಿ ಅಧಿಕಾರವಿರುವುದು ನಿಜವಾದ ಸ್ವರಾಜ್ಯವಲ್ಲವೆಂಬುದನ್ನೂ, ಅಧಿಕಾರದ ದುರುಪಯೋಗವಾದಾಗ ಅದನ್ನು ಇದಿರಿಸುವ ಸಾಮರ್ಥ್ಯವನ್ನು ಪಡೆಯುವುದೇ ನಿಜವಾದ ಸ್ವರಾಜ್ಯವೆಂಬುದನ್ನೂ ನಾನು ಸಿದ್ಧಮಾಡಿತೋರಲು ಆಶಿಸುತ್ತೇನೆ. ಅಧಿಕಾರವನ್ನು ನಿಯಂತ್ರಿಸಿ, ಅದನ್ನು ಸರಿಯಾಗಿ ಚಲಾಯಿಸುವಂತೆ ಜನತೆಯಲ್ಲಿ ಜ್ಞಾನಪ್ರಸಾರಮಾಡಿ, ಅವರಲ್ಲಿ ಆ ಸಾಮರ್ಥ್ಯವನ್ನುಂಟುಮಾಡಿಕೊಡುವುದೇ ನಿಜವಾದ ಸ್ವರಾಜ್ಯ.

(ಯ. ಇ. ೧೯೨೫)



# ಜನತೆಯ ಹೊಣೆಗಾರಿಕೆಯೇ ಸ್ವಾತಂತ್ರ್ಯ

ಇಂಗ್ಲೀಷರು ತಮ್ಮ ದೇಶಕ್ಕೆ ಹಿಂತಿರುಗಿ ಹೋಗುವುದೇ ಸ್ವಾತಂತ್ರ್ಯವಲ್ಲ. ಹಳ್ಳಿಗಾಡಿನ ಸಾಮಾನ್ಯ ಜನತೆಯು ತನ್ನ ಭವಿತವ್ಯಕ್ಕೆ ತಾನೇ ಹೊಣೆ ಎಂಬುದನ್ನರಿತುಕೊಂಡು, ತನ್ನ ಪ್ರತಿನಿಧಿಗಳ ಮೂಲಕ ತನಗೆ ಬೇಕಾದ ಕಾಯಿದೆ ಕಾನೂನು- ಗಳನ್ನು ರಚಿಸಿಕೊಳ್ಳುವಂತಾಗುವುದೇ ಸಾತಂತ್ರ್ಯ.

(ಯ. ಇ. ೧೯೩೦)

× × ×

ನನ್ನ ಪ್ರಕಾರ "ಭಾರತೀಯ ಸ್ವಾತಂತ್ರ್ಯ" ವೆಂದರೆ ಜನತೆಯ ಆಳಿಕೆ, ನ್ಯಾಯಬದ್ಧವಾದ ಆಳಿಕೆ. ಪೂರ್ಣ ಸ್ವಾತಂತ್ರ್ಯವೆಂದರೇನೆಂಬ ಬಗೆಗೆ ಯಾವ ತಪ್ಪು ಗ್ರಹಿಕೆಯೂ ಆಗದಿರಲಿ. ದುಡಿಯುತ್ತಿರುವ ಲಕ್ಷಾಂತರ ಜನತೆಗೆ ಆರ್ಥಿಕ ಸ್ವಾತಂತ್ರ್ಯ ಸಿಗುವುದೇ ಪೂರ್ಣ ಸ್ವಾತಂತ್ರ್ಯ.

(ಯ. ಇ. ೧೯೩೧)

× × ×

ಆದ್ದರಿಂದ ಅದರ ಉದ್ದೇಶವನ್ನು ನಾನು ಸ್ಪಷ್ಟಪಡಿಸು- ತ್ತೇನೆ— ಸ್ವಾತಂತ್ರ್ಯವೆಂದರೆ, ಪರದಾಸ್ಯದಿಂದ ಎಲ್ಲ ರೀತಿ-

ಯಿಂಪಲೂ ಬಿಡುಗಡೆಹೊಂದುವುದು, ಹಾಗೂ ಮೂಕ ಜನತೆಯು ಸಲುವಾಗಿಯೇ ಬಿಡುಗಡೆ ಹೊಂದುವುದು. ಈ ಉದ್ದೇಶವನ್ನು ಇದಿರಿಸುವವರೆಲ್ಲರೂ ತಮ್ಮ ಧೋರಣೆಯನ್ನು ಬದಲಾಯಿಸಿಕೊಳ್ಳತಕ್ಕದ್ದು. ಅದು ಸಾಧ್ಯವಾಗದಿದ್ದರೆ, ಹಿಮ್ಮೆಟ್ಟಿ ಹೋಗತಕ್ಕದ್ದು.

(ಯ. ಇ. ೧೯೩೧)

---

## ಅಸ್ವತಂತ್ರತೆಗಿಂತ ಮರಣವೇ ಲೇಸು

ಸ್ವತಂತ್ರ ಸ್ತ್ರೀ-ಪುರುಷರಾಗಿ ನಾವು ಬಾಳಲಾರೆವಾದರೆ, ಮರಣವೇಲೇಸೆನ್ನಲು ಹಿಂಜರಿಯಬಾರದು.

(ಯ. ಇ. ೧೯೨೨)

---

## ಸ್ವಾತಂತ್ರ್ಯವು ಬಾಳಿನುಸಿರು

ಪ್ರತಿಯೊಂದು ದೇಶವೂ ಉಣ್ಣಲಿಕ್ಕೆ, ತಿನ್ನಲಿಕ್ಕೆ, ಕುಡಿಯಲಿಕ್ಕೆ, ಉಸಿರೆಳೆಯಲಿಕ್ಕೆ ಅರ್ಹತೆಯುಳ್ಳದ್ದಾಗಿರುವಂತೆಯೇ ಪ್ರತಿಯೊಂದು ಜನಾಂಗವೂ—ಎಷ್ಟೇ ಅನಮುರ್ವಕವಾಗಿಯಾದರೂ—ತನ್ನನ್ನು ತಾನೇ ಆಳಿಕೊಳ್ಳುವ ಸ್ವಾತಂತ್ರ್ಯಕ್ಕೆ ಅರ್ಹವಾಗಿದೆ.

(ಯ. ಇ. ೧೯೩೧)

---

## ಸ್ವಾತಂತ್ರ್ಯಕ್ಕೆ ಸಾವಕಾಶ ಸಲ್ಲದು

'ಸಾವಕಾಶ ಸ್ವಾತಂತ್ರ್ಯ' ಎಂಬ ವಸ್ತುವಿಲ್ಲ ಸ್ವಾತಂತ್ರ್ಯವು ಹೆರಿಗೆಯಂತಿದೆ ನಾವು ಪೂರ್ಣ ಸ್ವತಂತ್ರರಾಗುವವರೆಗೆ ಗುಲಾಮರೇ ಸರಿ. ಹೆರಿಗೆಯೆಂಬುದೆಲ್ಲವೂ ಒಂದೇ ನಿಮಿಷದಲ್ಲಾಗುತ್ತದೆ.

(ಯ. ಇ. ೧೯೨೯)

---

## ಸ್ವಾತಂತ್ರ್ಯವು ದಾನ ವಸ್ತುವಲ್ಲ

ಸ್ವಾತಂತ್ರ್ಯವು ಎಂದಿಗೂ ಒಂದು ಜನಾಂಗವು ಇನ್ನೊಂದು ಜನಾಂಗಕ್ಕೆ ತಾನಾಗಿಯೇ ಕೊಡುವ ದಾನವಸ್ತುವಾಗಲಾರದು. ಜನಾಂಗವು ತನ್ನ ಪವಿತ್ರ ರಕ್ತವನ್ನು ಕೊಟ್ಟು ಕೊಳ್ಳುವ ಭಂಡಾರವದು. ಅಪರಿಮಿತವಾದ ಕಷ್ಟಗಳನ್ನು ಅನುಭವಿಸುತ್ತ ನಿರಂತರ ಶ್ರಮಿಸುವುದರಿಂದಲೇ ಸ್ವಾತಂತ್ರ್ಯವೆಂಬ ಫಲವು ದೊರೆಕುತ್ತದೆ.

(ಯ. ಇ. ೧೯೨೨)

---

# ನನ್ನ ಕಲ್ಪನೆಯ ಸ್ವಾತಂತ್ರ್ಯ

ನನ್ನ ಕಲ್ಪನೆಯ ಸ್ವರಾಜ್ಯದ ಬಗೆಗೆ ಯಾವ ತಪ್ಪು ತಿಳಿವಳಿಕೆಯೂ ಆಗದಿರಲಿ—ಪರದಾಸ್ಯದಿಂದ ಸಂಪೂರ್ಣ ಬಿಡುಗಡೆ ಹೊಂದುವುದು ಹಾಗೂ ಆರ್ಥಿಕವಾಗಿ ಪೂರ್ಣ ಸ್ವತಂತ್ರವಾಗುವುದೇ ಸ್ವರಾಜ್ಯ. ಹೀಗೆ, ಇದರ ಒಂದು ಅಂಚು ರಾಜಕೀಯ ಸ್ವಾತಂತ್ರ್ಯವಾಗಿದ್ದು, ಮತ್ತೊಂದು ಅಂಚು ಆರ್ಥಿಕ ಸ್ವಾತಂತ್ರ್ಯವಾಗಿದ್ದರೆ, ಅದಕ್ಕೆ ಇನ್ನೂ ಎರಡು ಅಂಚುಗಳುಂಟು. ಅವುಗಳಲ್ಲೊಂದು ಅಂಚೆಂದರೆ ನೈತಿಕ ಮತ್ತು ಸಾಮಾಜಿಕ, ಅರ್ಥಾತ್ ಅತ್ಯಂತ ಶ್ರೇಷ್ಠ ಮತವೆನಿಸಿದ ಧರ್ಮವಾಗಿದೆ. ಈ ಧರ್ಮವು ಹಿಂದೂ, ಮುಸ್ಲಿಂ, ಕ್ರೈಸ್ತ ಮೊದಲಾದ ಮತಗಳನ್ನೆಲ್ಲ ಒಳಗೊಂಡಿದ್ದು, ಅವೆಲ್ಲಕ್ಕೂ ಮೇಲಿನದಾಗಿದೆ. ಅದನ್ನು 'ಸತ್ಯಧರ್ಮ' ಎಂಬ ಹೆಸರಿನಿಂದ ಗುರುತಿಸಿಕೊಳ್ಳಬೇಕು. ಅದು ಯಾವ ಬದಲಾವಣೆಗೂ ನಾಶಕ್ಕೂ ಒಳಗಾಗದೆ ಸರ್ವವ್ಯಾಪಿಯಾಗಿದೆ. ನೈತಿಕ ಮತ್ತು ಸಾಮಾಜಿಕ ಉದ್ಧಾರಕ್ಕೆ 'ಅಹಿಂಸೆ' ಎಂದು ಕರೆಯಬಹುದು. ಹೀಗೆ ನನ್ನ ಕಲ್ಪನೆಯ ಸ್ವಾತಂತ್ರ್ಯವು ನಾಲ್ಕು ಅಂಚುಗಳುಳ್ಳ ಒಂದು 'ಚಚೌಕ'ದಂತಿದೆ ಎನ್ನಬಹುದು. ಅದರ ಯಾವುದೊಂದೇ ಅಂಚು ಅಥವಾ ತುದಿಯು ಸರಿಯಾಗಿಲ್ಲದೆ ಹೋದರೆ, ಚಚೌಕವು ಕೆಟ್ಟು ಹೋಗುವುದು. ಸತ್ಯ ಮತ್ತು ಅಹಿಂಸೆಯನ್ನು ಆಚರಣೆಗೆ

ತಾರದೆ, ದೇವರಲ್ಲಿ ನಿಜವಾದ ಶ್ರದ್ಧೆ ಇಡದೆ ನಡೆದರೆ, ಈ ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯವನ್ನೂ, ತನ್ಮೂಲಕವಾಗಿ, ನೈತಿಕ ಮತ್ತು ಸಾಮಾಜಿಕ ಉದ್ಧಾರವನ್ನೂ ಸಾಧಿಸಲಾರೆವು.

ಬ್ರಿಟಿಷ್ ಪಾರ್ಲಿಮೆಂಟಿನ ಅನುಕರಣೆಯಾಗಲೀ, ರಶಿಯಾದ ಸೋವಿಯೆಟ್ ರಾಜ್ಯ, ಇಟಲಿಯ ಫೇಸಿಸ್ಟ್ ಆಳಿಕೆ ಇಲ್ಲವೆ ಜರ್ಮನಿಯ ನಾಝಿ ಪದ್ಧತಿಯ ಅನುಕರಣೆಯಾಗಲೀ ನನ್ನ ಕಲ್ಪನೆಯ ರಾಜಕೀಯ ಸ್ವಾತಂತ್ರ್ಯವಾಗಲಾರದು. ಅವೆಲ್ಲ ಅವರ ಅಭಿರುಚಿಗೆ ತಕ್ಕುದಾದ ಪದ್ಧತಿ ಇರಬೇಕು. ಅವರದೇನಿರಬೇಕೆಂಬುದನ್ನು ನಾನು ಹೇಳಲಾರೆನು. ಆದರೂ, "ನೀತಿವಂತನೇ ಬಲವಂತ'ನೆಂಬ ನೈತಿಕ ಶಕ್ತಿಯ ಆಧಾರದಮೇಲೆ ರಚಿತವಾದ ಜನತಾ ಸರಕಾರವೇ "ರಾಮರಾಜ್ಯ"ವೆಂದು ನಾನು ಬಣ್ಣಿಸಿದ್ದೇನೆ.

ಹಾಗೆಯೇ ಆರ್ಥಿಕ ಸ್ವಾತಂತ್ರ್ಯವನ್ನಷ್ಟು ನೋಡೋಣ. ಆಧುನಿಕ ಪಾಶ್ಚಿಮಾತ್ಯ ಔದ್ಯಮೀಕರಣದ ಫಲವು ಆರ್ಥಿಕ ಸ್ವಾತಂತ್ರ್ಯವಲ್ಲ. ನನ್ನ ದೃಷ್ಟಿಯಲ್ಲಿ, ಭಾರತೀಯರ ಆರ್ಥಿಕ ಸ್ವಾತಂತ್ರ್ಯವೆಂದರೆ, ಪ್ರತಿಯೊಬ್ಬ ಭಾರತೀಯ ಸ್ತ್ರೀ-ಪುರುಷನೂ ತನ್ನ ಸ್ವಂತ ಪ್ರಯತ್ನಗಳಿಂದ ಆರ್ಥಿಕವಾಗಿ ಉತ್ತಮ ಸ್ಥಿತಿಗೆ ಬರುವುದು. ಈ ಪದ್ಧತಿಯ ಪ್ರಕಾರ ಎಲ್ಲ ಸ್ತ್ರೀ-ಪುರುಷರಿಗೂ ಸಾಕಷ್ಟು ಹೊಟ್ಟೆ ಬಟ್ಟೆಗೆ ಸಿಕ್ಕುವಂತಾಗುವುದು. ಲಕ್ಷಾಂತರ ಜನರಿಗೆ ಈಗ ದೊರೆಯದಿರುವ ಹಾಲು-ಬೆಣ್ಣೆಗಳೂ ಸಿಗುವಂತಾಗುವವು.

(ಹ. ೧೯೩೭)

# ಪೂರ್ಣ ಸ್ವಾತಂತ್ರ್ಯದ ಮಾರ್ಗ

ವಿಧಾಯಕ ಕಾರ್ಯಕ್ರಮವೇ ಸತ್ಯ ಮತ್ತು ಅಹಿಂಸಾ ಮಾರ್ಗದಿಂದ ಪೂರ್ಣ ಸ್ವರಾಜ್ಯವನ್ನು ಗಳಿಸುವ ದಾರಿಯಾಗಿದೆ. ಅದರ ಪರಿಪೂರ್ಣ ಪ್ರಾಪ್ತಿಯೇ "ಪೂರ್ಣ ಸ್ವಾತಂತ್ರ್ಯ". ತಳ-ಪಾಯದಿಂದ ಹಿಡಿದು, ಜನಾಂಗವನ್ನು ಗಟ್ಟಿಮುಟ್ಟಾಗಿ ಕಟ್ಟು-ವುದಕ್ಕಾಗಿಯೇ ಸಿದ್ಧಗೊಳಿಸಿರುವ ವಿಧಾಯಕ ಕಾರ್ಯಕ್ರಮದಲ್ಲಿ ಜನಾಂಗದ ನಾಲ್ವತ್ತು ಕೋಟಿ ಜನರೂ ತೊಡಗಿದರೆ ಎಷ್ಟು ಒಳ್ಳೆಯದಾದೀತು! ಅದರ ಮೂಲಕವಾಗಿಯೇ ಎಲ್ಲ ರೀತಿಯ ಪೂರ್ಣ ಸ್ವಾತಂತ್ರ್ಯವೂ, ಪರದಾಸ್ಯವಿಮೋಚನೆಯೂ ದೊರೆ-ಯುತ್ತದೆ—ಎಂಬ ಸತ್ಯವನ್ನು ಯಾರಾದರೂ ಅಲ್ಲಗಳೆಯಲು ಸಾಧ್ಯವೆ? ಈ ರಚನಾತ್ಮಕ ಕಾರ್ಯಕ್ರಮದಲ್ಲಿ ಸಮಸ್ತ ಜನತೆಯೂ ಸಹಕರಿಸಲಾರದೆಂಬ ಭಾವನೆಯೇ ಟೀಕಾಕಾರರು ಮಾಡುವ ಕುಚೇಷ್ಟೆಗೆ ಕಾರಣವಾಗಿದೆ. ಅವರ ಈ ಕುಚೇಷ್ಟೆಯಲ್ಲಿ ಸಾಕಷ್ಟು ಸತ್ಯವಿಲ್ಲದೇ ಇಲ್ಲ. ಅವರಿಗೆ ನನ್ನ ಉತ್ತರವಿಷ್ಟೇ—ಈ ಕಾರ್ಯಕ್ರಮವು ಆಚರಣೆಗೆ ಯೋಗ್ಯವಾಗಿದ್ದು, ಇನ್ನಷ್ಟು ಪ್ರಯತ್ನಮಾಡಬೇಕು. ಶುದ್ಧಾಂತಃಕರಣದ ಕಾರ್ಯಕರ್ತರು ಅಚಲ ನಿರ್ಧಾರದಿಂದ ದುಡಿದರೆ ಈ ಕಾರ್ಯಕ್ರಮವು, ಇತರ ಎಲ್ಲ ಕಾರ್ಯಕ್ರಮಗಳಿಗಿಂತ ಹೆಚ್ಚು ಸುಲಭವಾಗಿ, ಯಶಸ್ವಿ-

ಯಾಗುವುದು. ಏನೇ ಆಗಲಿ, ಅಹಿಂಸೆಯ ತಳಹದಿಯಮೇಲೆ ಇವರ ಬದಲು ಬೇರಾವ ಕಾರ್ಯಕ್ರಮವೂ ನನಗೆ ಕಾಣಿಸುತ್ತಿಲ್ಲ.

× × ×

ಸತ್ಯ ಮತ್ತು ಅಹಿಂಸೆಯ ಮೂಲಕ ಪಡೆಯುವ ಪೂರ್ಣ-ಸ್ವಾತಂತ್ರ್ಯದಲ್ಲಿ, ಜಾತಿ, ಮತ, ಬಣ್ಣಗಳ ಭೇದಕ್ಕೆಡೆಯಿಲ್ಲದೆ, ಜನಾಂಗದ ತೀರ ದರಿದ್ರರಾದವರಿಗೂ ಸ್ವಾತಂತ್ರ್ಯವು ಸಿಗುವುದು. ಈ ಸ್ವಾತಂತ್ರ್ಯವು ಯಾರೊಬ್ಬರದೇ ಸ್ವತ್ತಾಗುವದಿಲ್ಲ. ಆದ್ದರಿಂದ ಇದು ಪರಸ್ಪರಾವಲಂಬನ ಮತ್ತು ಸಹಕಾರಗಳಿಗೆ ಸಂಪೂರ್ಣ ಅವಿರೋಧವಾಗಿಯೂ ಇರುವುದು. ಯುಕ್ಲಿಡ್‌ನ ರೇಖಾ-ಶಾಸ್ತ್ರದ ಮಾನಸಿಕ ರೇಖೆಗೂ ಕಾಗದದ ಮೇಲಿನ ರೇಖೆಗೂ ಹೇಗೆ ತುಸು ಅಂತರವು ಅನಿವಾರ್ಯವಾಗಿರುವದೋ ಹಾಗೆಯೇ ಆಚರಣೆಯಲ್ಲಿ ಪರಿಪೂರ್ಣತೆಯನ್ನು ಸಾಧಿಸುವುದು ಯಾವಾ-ಗಲೂ ದುಸ್ತರವೇ ಸರಿ. ಹಾಗೆಯೇ, ಸಂಪೂರ್ಣ ಸ್ವಾತಂತ್ರ್ಯ-ವೆಂಬುದೂ ಸತ್ಯ-ಅಹಿಂಸೆಯ ಆಚರಣೆಯು ಎಷ್ಟು ಪರಿಪೂರ್ಣ-ವಾಗಿರುತ್ತದೋ ಅಷ್ಟೇ ಪರಿಪೂರ್ಣವಾಗಿರುತ್ತದೆ.

ವಾಚಕನು ನನ್ನ ಈ ವಿಧಾಯಕ ಕಾರ್ಯಕ್ರಮದ ಪೂರ್ಣ-ಚಿತ್ರವನ್ನು ಮನಸ್ಸಿನಲ್ಲಿಯೇ ಕಲ್ಪಿಸಿಕೊಂಡು ನೋಡಲಿ. ಅದನ್ನು ಪರಿಪೂರ್ಣವಾಗಿ ಆಚರಿಸಲು ಸಾಧ್ಯವಾಗುವುದೇ ನಾವು ಆಶಿಸುವ ಪೂರ್ಣ ಸ್ವಾತಂತ್ರ್ಯವಾಗುವುದು.

ಆದರೆ, ಹಿಂಸಾ ಮಾರ್ಗದಿಂದ ಪರಿಪೂರ್ಣವೆನಿಸುವ ಸ್ವಾತಂತ್ರ್ಯವು ಶಕ್ಯವೇ ಇಲ್ಲ. ಯಾಕಂದರೆ, ಜನಾಂಗದ ಯಾವ ಪಕ್ಷವು ಹೆಚ್ಚು ಪರಿಣಾಮಕಾರಿಯಾಗಿ ಹಿಂಸಾಮಾರ್ಗ-ವನ್ನವಲಂಬಿಸುವುದೋ ಅದು ಇತರ ಪಕ್ಷಗಳನ್ನೆಲ್ಲ ಮೆಟ್ಟಿ

ನಿಲ್ಲದೇ ಗತ್ಯಂತರವಿಲ್ಲವೆನಿಸುವುದು. ಅಂತಹ ಪೂರ್ಣ ಸ್ವಾತಂತ್ರ್ಯದಲ್ಲಿ ಆರ್ಥಿಕವಾಗಲಿ, ಇತರ ಯಾವುದೇ ಬಗೆಯು ದಾಗಲೀ, ಪೂರ್ಣ ಸಮಾನತೆಯ ಕಲ್ಪನೆಗೂ ಎಡೆಯಿಲ್ಲ !

ಅಹಿಂಸಾಮಾರ್ಗದಿಂದ ರಚನಾತ್ಮಕ ಕಾರ್ಯಕ್ರಮವನ್ನು ಅನುಸರಿಸಬೇಕೆಂಬುದನ್ನು ವಾಚಕರಿಗೆ ಮನವರಿಕೆಮಾಡಿಕೊಡು ವುದೇ ನನ್ನ ಉದ್ದೇಶ. ಆದ್ದರಿಂದ, ಪೂರ್ಣ ಸ್ವಾತಂತ್ರ್ಯದ ಸಾಧನೆಗೆ ಹಿಂಸಾಮಾರ್ಗವು ನಿಷ್ಪ್ರಯೋಜಕವೆಂಬ ನನ್ನ ವಾದ-ವನ್ನು ಸ್ವೀಕರಿಸುವ ಅಗತ್ಯವಿಲ್ಲ. ಹಿಂಸಾಮಾರ್ಗದಿಂದ ಪಡೆಯುವ ಪೂರ್ಣ ಸ್ವಾತಂತ್ರ್ಯದಲ್ಲಿ, ಜನಾಂಗದ ತೀರ ದರಿದ್ರರಿಗೂ ಪೂರ್ಣ ಸ್ವಾತಂತ್ರ್ಯ ಸಿಗುವುದೆಂದು ವಾಚಕರು ಭಾವಿಸಿದರೆ ನನ್ನದೇನೂ ಅಡ್ಡಿ ಇಲ್ಲ; ಆದರೆ, ನನ್ನ ರಚನಾತ್ಮಕ ಕಾರ್ಯಕ್ರಮವನ್ನು ಇಡೀ ಜನಾಂಗವು ಆಚರಣೆಗೆ ತರುವುದ-ರಿಂದಲೂ ಅದು ಸಾಧ್ಯವೆಂದು ಅವರು ತಿಳಿದರೆ ಸಾಕು.

(ರಚನಾತ್ಮಕ ಕಾರ್ಯಕ್ರಮ—ಪು. ೫–೭)

---

# ಸ್ವಾತಂತ್ರ್ಯದ ಸಾಮುದ್ರಿಕ ವರ್ತುಲ

ಸ್ವಾತಂತ್ರ್ಯವು ತಳದಿಂದ ಸುರುವಾಗಬೇಕು. ಪ್ರತಿಯೊಂದು ಗ್ರಾಮವೂ ಒಂದು ಪ್ರಜಾರಾಜ್ಯ ಇಲ್ಲವೆ ಪಂಚಾಯತ ರಾಜ್ಯವಾಗಬೇಕು. ಎಲ್ಲ ಅಧಿಕಾರಿಗಳೂ ಅದರ ಕೈಯಲ್ಲಿರಬೇಕು. ಅಂದರೆ, ಪ್ರತಿಯೊಂದು ಗ್ರಾಮವೂ ತನ್ನ ಯೋಗಕ್ಷೇಮವನ್ನು ತಾನೇ ನೋಡಿಕೊಳ್ಳುವಷ್ಟು ಸ್ವಾವಲಂಬಿಯಾಗಬೇಕು. ಸಂದರ್ಭ ಬಂದರೆ, ತನ್ನ ಸ್ವಾತಂತ್ರ್ಯ ರಕ್ಷಣೆಗಾಗಿ ಇಡೀ ಜಗತ್ತನ್ನೇ ಇದಿರಿಸುವಷ್ಟು ಸ್ವಸಾಮರ್ಥ್ಯ ಉಳ್ಳದ್ದಾಗಬೇಕು. ಆತ್ಮರಕ್ಷಣೆಗಾಗಿ ಅದು ತಕ್ಕ ತರಬೇತಿಹೊಂದಿದ್ದು, ಹೊರಗಿನ ದಾಳಿಯನ್ನಿದಿರಿಸುವುದರ ಸಲುವಾಗಿ ಆತ್ಮಾರ್ಪಣಮಾಡಲಿಕ್ಕೂ ಸಿದ್ಧವಾಗಿರಬೇಕು. ಈ ರೀತಿಯಲ್ಲಿ ಗ್ರಾಮವೇ ಮೂಲ ಘಟಕವಾಗಿರತಕ್ಕದ್ದು. ಹೀಗೆಂದಮಾತ್ರಕ್ಕೆ, ನೆರೆಹೊರೆಯ ಹಾಗೂ ಹೊರಜಗತ್ತಿನ ಸಂಪರ್ಕ ಅಥವಾ ಸಹಾಯವನ್ನು ನಿರಾಕರಿಸಬೇಕೆಂದು ಅರ್ಥವಲ್ಲ. ಅಂತಹ ಸಂಪರ್ಕ-ಸಹಾಯಗಳು ಪರಸ್ಪರ ಸ್ವಯಂಚಾಲಿತವಾಗಿರಬೇಕು. ಇಂಥ ಸಮಾಜವು ಉತ್ತಮ ಸಂಸ್ಕೃತಿಯುಳ್ಳದ್ದಾಗಿದ್ದು, ಇದರಲ್ಲಿಯ ಪ್ರತಿಯೊಬ್ಬ ಸ್ತ್ರೀಪುರುಷನೂ ತನ್ನ ತನ್ನ ಆವಶ್ಯಕತೆಗಳನ್ನು ತಿಳಿದುಕೊಂಡು, ಶ್ರಮಕ್ಕೆ ತಕ್ಕ ಪ್ರತಿಫಲವು ಎಲ್ಲರಿಗೂ ಸಿಗುವಂತೆ ನೋಡಿಕೊಳ್ಳುವನು.

ಇಂಥ ಸಮಾಜವು, ಸ್ವಾಭಾವಿಕವಾಗಿಯೇ, ಸತ್ಯ ಮತ್ತು ಅಹಿಂಸೆಯ ತಳಹದಿಯಮೇಲೆ ರಚಿತವಾಗಿರಬೇಕಾಗುವುದು. ನನ್ನ ಅಭಿಪ್ರಾಯವನ್ನು ಹೇಳುವುದಾದರೆ, ಸರ್ವಜ್ಞನೂ, ಸರ್ವಶಕ್ತನೂ, ಸ್ವಯಂಭುವೂ ಆದ ದೇವರಲ್ಲಿ ದೃಢ ಶ್ರದ್ಧೆ ಇಲ್ಲದೆ ಸತ್ಯ ಮತ್ತು ಅಹಿಂಸೆಯನ್ನು ಆಚರಿಸುವುದು ಅಶಕ್ಯ. ಆ ದೈವೀಶಕ್ತಿಯು ನಮಗೆ ತಿಳಿದಿರುವ ಎಲ್ಲ ಲೌಕಿಕ ಶಕ್ತಿಗಳನ್ನೂ ಆವರಿಸಿಕೊಂಡಿದ್ದು ಅವೆಲ್ಲವುಗಳಿಂದಲೂ ಸ್ವತಂತ್ರವಾಗಿದ್ದು, ಅವುಗಳು ಅಳಿದಮೇಲೂ ಉಳಿಯುವುದು. ಸರ್ವವ್ಯಾಪಿಯಾದ ಈ ಅಮರಜ್ಯೋತಿಯಲ್ಲಿ ನಂಬಿಕೆ ಇಲ್ಲದೆ ನಾನು ಬದುಕಲಾರೆನು.

ಅಸಂಖ್ಯಾತವಾದ ಗ್ರಾಮಗಳನ್ನೊಳಗೊಂಡ ಈ ಸ್ವಾತಂತ್ರ್ಯ ಮಂದಿರದಲ್ಲಿ ಪ್ರತಿಯೊಂದು ಗ್ರಾಮವೂ ಬೆಳೆಯುತ್ತ ಹೋಗುವ ಒಂದು ಪುಟ್ಟ ವರ್ತುಳದಂತಿರುವುದು. ಜನಜೀವನವು ಗೋಪುರಾಕೃತಿಯಲ್ಲಿ ಏರುತ್ತ, ಅದರ ಭಾರವನ್ನೆಲ್ಲ ತಳಗಟ್ಟು ಹೊತ್ತುಕೊಳ್ಳುವಂತಾಗಬಾರದು. ರಾಷ್ಟ್ರಜೀವನದಲ್ಲಿ ವ್ಯಕ್ತಿಯ ಜೀವನವೇ ಕೇಂದ್ರವಾಗಿದ್ದು, ಕುಟುಂಬ, ಗ್ರಾಮವೆಂಬ ವರ್ತುಲಗಳಾಗಿ ವಿಸ್ತರಿಸುತ್ತ ಸಮುದ್ರದಷ್ಟು ವಿಶಾಲವಾಗುತ್ತ ಹೋಗಬೇಕು. ಸಾಮೂಹಿಕ ಸುಖಕ್ಕಾಗಿ ವ್ಯಕ್ತಿಯು ಆತ್ಮಾರ್ಪಣ ಮಾಡಲಿಕ್ಕೂ ಸಿದ್ಧವಾಗಬೇಕು. ಹೀಗೆ, ವ್ಯಕ್ತಿಜೀವನಗಳು ವಿಕಾಸಗೊಂಡು, ವ್ಯಕ್ತಿಗಳು ತಾವು ಬೇರೆ, ಸಮಾಜ ಬೇರೆ ಎಂದು ತಿಳಿಯದೆ, ಸಾಮರಸ್ಯದಿಂದ ಬಾಳುವಂತಾಗಬೇಕು. ಯಾವ ವ್ಯಕ್ತಿಯೂ ದಂಭ ಇಲ್ಲವೆ ಅಹಂಕಾರದಿಂದ ಅನ್ಯ ವ್ಯಕ್ತಿಗಳಮೇಲೆ ಒಡೆತನಮಾಡದೆ, ವಿನೀತವಾಗಿದ್ದುಕೊಂಡು, ಎಲ್ಲರೂ, ಸಮುದ್ರದಷ್ಟು ವಿಶಾಲವಾದ ವರ್ತುಲದ ಭಾಗವೆಂದೂ

ಅದರ ಮಧ್ಯಬಿಂದುವಿನಷ್ಟು ಘನತೆ ಮತ್ತು ಗಾಂಭೀರ್ಯವನ್ನು ಪಡೆದವರೆಂದೂ ಭಾವಿಸಿ ಬದುಕಬೇಕು.

ಆದ್ದರಿಂದ, ಎಲ್ಲಕ್ಕೂ ದೊಡ್ಡದಾಗಿರುವ ಕಟ್ಟಕಡೆಯ ವರ್ತುಲವು ತನ್ನೊಳಗಿನ ವರ್ತುಲಗಳನ್ನು ಹಾಳುಮಾಡು-ವಂತಹ ಇಲ್ಲವೆ, ಕುಗ್ಗಿಸುವಂತಹ ಅಧಿಕಾರವನ್ನುಳ್ಳದಾಗಿರದೆ, ಅವುಗಳಿಗೆ ಶಕ್ತಿಯನ್ನು ನೀಡುತ್ತ, ಅವುಗಳ ಏಳಿಗೆಯಿಂದಲೇ ತಾನೂ ಏಳಿಗೆಹೊಂದುತ್ತ ಭದ್ರವಾಗಿ ಬಾಳುವುದು. "ಇದೊಂದು ಆದರ್ಶದ ಕನಸು. ಇದರ ಬಗೆಗೆ ಯೋಚಿಸುವುದು ನಿಷ್ಪ್ರಯೋ-ಜಕ" ಎಂದು ನನ್ನನ್ನು ಮೂದಲಿಸಬಹುದು. ಯೂಕ್ಲಿಡ್ ತತ್ತ್ವದ ಮಾನಸಿಕ ಬಿಂದುವನ್ನು ಎಂತಹ ನಿಪುಣನೂ ಕಾಗದದಮೇಲೆ ಗುರುತಿಸಲಾರನಾದರೂ, ಅದರ ಸತ್ಯತ್ವವು ಹೇಗೆ ಅವಿನಾಶಿಯಾಗಿರಬಲ್ಲುದೋ ಹಾಗೆ, ಮಾನವಲೋಕದ ಬಾಳಿಗೆ ನನ್ನ ಈ ಚಿತ್ರದ ಮೌಲ್ಯವೂ ಅವಿನಾಶಿಯಾಗಿರ-ಬಲ್ಲುದು. ಈ ಚಿತ್ರವನ್ನು ಸಂಪೂರ್ಣ ನಿರ್ದೋಷವಾಗಿ ರಚಿಸಿ-ಕೊಳ್ಳಲಿಕ್ಕೆ ಶಕ್ಯವಾಗದಿದ್ದರೂ, ಭಾರತವು ಅದರ ಸಾಧನೆ-ಗಾಗಿಯಾದರೂ ಪ್ರಯತ್ನಿಸಲಿ. ನಮಗೇನು ಬೇಕೋ ಅದರ ಸ್ಪಷ್ಟವಾದ ಕಲ್ಪನೆಯನ್ನು ನಾವು ಮೊಟ್ಟಮೊದಲು ಮಾಡಿ-ಕೊಳ್ಳದಿದ್ದರೆ, ಅದರ ಕಡೆಗೆ ಸಾಗುವುದಾದರೂ ಹೇಗೆ ? ಭಾರತದ ಪ್ರತಿಯೊಂದು ಹಳ್ಳಿಯೂ ಎಂದಾದರೊಂದು ದಿನ ಒಂದೊಂದು ಪ್ರಜಾರಾಜ್ಯವಾಗಿ ಬದುಕುವ ಕಾಲ ಬಂದರೆ, ತೀರ ಸಣ್ಣ ವರ್ತುಲದ ಮಧ್ಯಬಿಂದುವೂ ಸಮಾನಶಕ್ತಿಯುಳ್ಳ-ದ್ದಾಗಿ ಬಾಳಲೇಬೇಕಾಗುವುದೆಂಬ ನನ್ನ ಮಾತು ಯಥಾರ್ಥ-ವಾಗುವುದೆಂದು ನಾನು ತಿಳಿದಿದ್ದೇನೆ.

ಈ ಚಿತ್ರದಲ್ಲಿ ಪ್ರತಿಯೊಂದು ಮತಧರ್ಮಕ್ಕೂ ಪೂರ್ಣ

ಸ್ವಾತಂತ್ರ್ಯವೂ ಸಮಾನಾವಕಾಶವೂ ಇರುವುದು. ನಾವೆಲ್ಲರೂ ಒಂದು ಮಹಾವೃಕ್ಷದ ಎಲೆಗಳು; ಆದರ ಕಾಂಡವನ್ನು ಅಲುಗಾಡಿಸಿ, ಬೇರಿನಿಂದ ಅವನ್ನು ಬೇರ್ಪಡಿಸಲು ಶಕ್ಯವಿಲ್ಲ. ಏಕೆಂದರೆ ಆ ಬೇರು ಭೂಗರ್ಭದ ವರೆಗೂ ಇಳಿದು ಭದ್ರವಾಗಿಬಿಟ್ಟಿದೆ. ಎಂತಹ ಭೀಕರ ಬಿರುಗಾಳಿಯೂ ಅದನ್ನು ಕಪಲಿಸಲಾರದು.

ಈ ನನ್ನ ಕಲ್ಪನೆಯ ಸ್ವಾತಂತ್ರ್ಯದಲ್ಲಿ ಮನುಷ್ಯ ಶ್ರಮವನ್ನು ಆಕ್ರಮಿಸುವ ಹಾಗೂ ಕೆಲವೇ ಜನರ ಕೈಯಲ್ಲಿ ಅಧಿಕಾರವನ್ನು ಕೇಂದ್ರೀಕರಿಸಿಕೊಡುವ ಯಂತ್ರಗಳಿಗೆ ಸ್ಥಾನವಿಲ್ಲ. ಸುಸಂಸ್ಕೃತ ಮಾನವ ಸಮಾಜದಲ್ಲಿ ಶ್ರಮಕ್ಕೂ ಒಂದು ವಿಶಿಷ್ಟ ಸ್ಥಾನವಿರುತ್ತದೆ. ಪ್ರತಿ ವ್ಯಕ್ತಿಗೂ ಉಪಯೋಗಕ್ಕೆ ಬೀಳುವ ಯಂತ್ರಕ್ಕೆ ಮಾತ್ರ ಸ್ಥಾನವಿದೆ. ಆದರೆ ಪ್ರತಿವ್ಯಕ್ತಿಗೂ ಉಪಯೋಗವಾಗುವ ಈ ಯಂತ್ರ ಯಾವುದೆಂಬ ಬಗೆಗೆ ನಾನಿನ್ನೂ ವಿಚಾರಮಾಡಿರುವುದಿಲ್ಲ. ಅಂತಹ ಒಂದು ಯಂತ್ರವು "ಸಿಂಗರ್ ಹೊಲಿಗೆ ಯಂತ್ರ"ವಾಗಿದೆ. ಅದೂ ಕೂಡ ತೀರ ಅವಶ್ಯವಾದದ್ದಲ್ಲ. ನನ್ನ ಚಿತ್ರವನ್ನು ಪೂರ್ಣಗೊಳಿಸಲು ಅದರ ಅವಶ್ಯಕತೆ ನನಗಿಲ್ಲ.

(ಹ. ೧೯೪೬)

# ಅಹಿಂಸಾತ್ಮಕ ಸ್ವಾತಂತ್ರ್ಯ

ಅಹಿಂಸೆಯ ತಳಹದಿಯಮೇಲೆ ರಚಿತವಾದ ಸ್ವಾತಂತ್ರ್ಯದಲ್ಲಿ, ಜನರಿಗೆ ತಮ್ಮ ಹಕ್ಕುಗಳೇನೆಂಬುದು ತಿಳಿಯದಿದ್ದರೂ ಅಡ್ಡಿ ಇಲ್ಲ; ಆದರೆ ತಮ್ಮ ಕರ್ತವ್ಯಗಳೇನೆಂಬುದನ್ನವರು ತಿಳಿದುಕೊಳ್ಳುವುದು ಅತ್ಯಗತ್ಯ. ಕರ್ತವ್ಯವು ತನ್ನ ಕೂಡವೇ ಹಕ್ಕನ್ನೂ ನಿರ್ಮಿಸಿಕೊಂಡು ಬರುತ್ತದೆ. ಸ್ವಕರ್ತವ್ಯವನ್ನು ಮಾಡುವುದರಿಂದ ಬರುವ ಹಕ್ಕೇ ನಿಜವಾದ ಹಕ್ಕು. ಆದ್ದರಿಂದ, ಯಾವನು ತಾನು ವಾಸಿಸಿರುವ ದೇಶಕ್ಕೆ ಸೇವೆ ಸಲ್ಲಿಸುತ್ತಾನೋ ಅವನಿಗೆ ಮಾತ್ರವೇ ಆ ದೇಶದ ನಾಗರಿಕನಿಗಿರುವ ಹಕ್ಕುಗಳು ಪ್ರಾಪ್ತವಾಗುತ್ತವೆ. ಅಲ್ಲದೆ, ಅಂಥವರುಮಾತ್ರವೇ ತಮ್ಮ ಹಕ್ಕುಗಳನ್ನು ಸರಿಯಾಗಿ ನಿರ್ವಹಿಸಬಲ್ಲವರಾಗುತ್ತಾರೆ. ಪ್ರತಿಯೊಬ್ಬನಿಗೂ ಸುಳ್ಳು ಹೇಳುವ ಇಲ್ಲವೇ ಪುಂಡತನಮಾಡುವ ಹಕ್ಕು ಇದ್ದೇ ಇದೆ. ಆದರೆ, ಆ ಹಕ್ಕನ್ನು ಚಲಾಯಿಸುವುದರಿಂದ ಚಲಾಯಿಸುವವನಿಗೂ ಸಮಾಜಕ್ಕೂ ಹಾನಿಯಾಗುವುದು. ಸತ್ಯ ಮತ್ತು ಅಹಿಂಸೆಯಿಂದ ನಡೆಯುವವನಿಗೆ ಗೌರವ ಬರುತ್ತದೆ, ಅದರೊಂದಿಗೆ ಹಕ್ಕುಗಳೂ ಬರುತ್ತವೆ. ಕರ್ತವ್ಯಮಾಡಿ ಹಕ್ಕನ್ನು ಗಳಿಸಿಕೊಳ್ಳುವವರು ಅದನ್ನು ಸ್ವಂತಕ್ಕಾಗಿ ಉಪಯೋಗಿಸಿಕೊಳ್ಳದೆ ಸಮಾಜದ ಸೇವೆಗಾಗಿ ಉಪಯೋಗಿಸುವರು. ಜನತೆಯ

ಸ್ವಾತಂತ್ರ್ಯವೆಂದರೆ ವ್ಯಕ್ತಿಗಳ ಸ್ವಾತಂತ್ರ್ಯದ ಸಮೂಹ. ಅಂತಹ ಸ್ವಾತಂತ್ರ್ಯವು ವ್ಯಕ್ತಿಗಳು ತಮ್ಮ ತಮ್ಮ ನಾಗರಿಕ ಕರ್ತವ್ಯಗಳನ್ನು ಮಾಡುವುದರಿಂದಲೇ ಬರುತ್ತದೆ. ಅದರಲ್ಲಿ ಯಾರೊಬ್ಬನೂ ತನ್ನ ಹಕ್ಕುಗಳ ಬಗೆಗೆ ಚಿಂತಿಸುವುದಿಲ್ಲ. ಜನರು ತಮ್ಮ ಕರ್ತವ್ಯಗಳನ್ನು ಮತ್ತಷ್ಟು ಚೆನ್ನಾಗಿಮಾಡ-ಬಯಸಿದಾಗ ಅವುಗಳು ತಾವಾಗಿಯೇ ಬರುತ್ತವೆ.

ಹಳ್ಳಿಗಳಿಗೆ ಹೋಗುವ ಗಂಡಸರಾಗಲೀ ಹೆಂಗಸರಾಗಲೀ, ಹಳ್ಳಿಗರು ತಮ್ಮ ಹಳ್ಳಿಗಳನ್ನು ಸ್ವಚ್ಛವಾಗಿಡಬೇಕೆಂದೂ, ಸ್ವಾವ-ಲಂಬಿಗಳಾಗಬೇಕೆಂದೂ, ಅದು ಅವರ ಕರ್ತವ್ಯವೆಂದೂ ಹೇಳು-ತ್ತಾರೆ. ಸ್ವತಂತ್ರ ಸರಕಾರವೇ ಈ ಕೆಲಸವನ್ನು ಮಾಡಿಕೊಡುವು-ದೆಂದು ಅವರು ನಿರೀಕ್ಷಿಸಬಾರದು. ನಮ್ಮ ಹಳ್ಳಿಗಳು ಗ್ರಾಮೋ-ದ್ಯೋಗಗಳ ಕಣ್ಮರೆಯಿಂದಾಗಿ ವಿನಾಶದ ಅಂಚಿನಲ್ಲಿವೆ. ಗ್ರಾಮೋದ್ಯೋಗಗಳ ಪುನರುಜ್ಜೀವನದಿಂದಲೇ ಅವುಗಳನ್ನು ಪುನಃ ಚೈತನ್ಯಭರಿತವಾಗಿ ಮಾಡಬೇಕಾಗಿದೆ. ಇವುಗಳಲ್ಲಿ ಚರಖಕ್ಕೇ ಕೇಂದ್ರಸ್ಥಾನ ಬರುವುದು. ಉಳಿದ ಉದ್ಯೋಗಗಳು ಅದನ್ನು ಒಳಸಿಕೊಂಡಿರಬೇಕು. ಇದರಿಂದ ಎಲ್ಲ ಜನರೂ ಉದ್ಯೋಗದ ಬೆಲೆಯನ್ನರಿಯುವರು; ಅಲ್ಲದೆ ಎಲ್ಲರೂ ರಾಷ್ಟ್ರ ಹಿತಕರವಾದ ಉದ್ಯೋಗಗಳಲ್ಲಿ ತೊಡಗಿದರೆ, ಜನತೆಯು ಜನತೆಗಾಗಿಯೇ ಲಕ್ಷಾಂತರ ರೂಪಾಯಿ ಉಳಿಸಿಕೊಂಡಂತಾಗು-ವುದು. ಹೀಗೆ ಪ್ರತಿಯೊಂದು ವ್ಯಕ್ತಿಯೂ ಸ್ವಯಂಸೇವಕನಾಗಿ ಸ್ವಾವಲಂಬಿಯಾಗುವ ತತ್ತ್ವವನ್ನು ಆಚರಿಸಿ ತೋರಿಸಿದಂತಾ-ಗುವುದಲ್ಲದೆ, ಅವನು ತೀರ ಅಲ್ಪ ಕರವನ್ನು ತೆತ್ತು ಬೇರೆ ಯಾವ ಆಡಳಿತ ಪದ್ಧತಿಯಿಂದಲೂ ಸಿಗುವುದಕ್ಕಿಂತ ಹೆಚ್ಚಿನ ಸುಖವನ್ನು ಪಡೆಯಬಹುದು. ಯಾರು ರಾಷ್ಟ್ರಕ್ಕಾಗಿ ಶ್ರಮಮಾಡುತ್ತಾರೋ

ಅವರು ನಾಣ್ಯದ ಬದಲು ಶ್ರಮರೂಪದಲ್ಲಿಯೇ ಕರ ತೆತ್ತಂತಾಗುವುದು. ನಾಣ್ಯಗಳಾದರೋ ಶ್ರಮದ ಒಂದು ಅಳತೆಯ ಚಿಹ್ನೆ. ಅದಕ್ಕೆ ಮತ್ತಾವ ಬೆಲೆಯೂ ಇರುವುದಿಲ್ಲ. ನಾನು ಒಂದು ರೂಪಾಯಿ ಕಿಮ್ಮತ್ತಿನ ಹಿಟ್ಟನ್ನು ಕೊಂಡರೆ, ಅದಕ್ಕೆ ಕೃಷಿಶ್ರಮದ ಕೂಲಿ, ಸಾಗುಕೂಲಿ ಹಾಗೂ ಬೀಸಿದ ಕೂಲಿ ಕೊಟ್ಟಂತಾಗುವುದು. ಆದ್ದರಿಂದ, ಯಾವನು ಸಂಪದುತ್ಪಾದನೆಯನ್ನರಿತು ಕೆಲಸಮಾಡುವನೋ ಅವನು ಸಂಪತ್ತಿನ ನಿಜವಾದ ಒಡೆಯನಾಗುವನು. ರಾಷ್ಟ್ರದ ಸರಕಾರಕ್ಕೆ ನಾನು ಶ್ರಮರೂಪವಾಗಿ ಕರತೆರುವುದೂ, ಹಣರೂಪವಾಗಿತೆರುವುದೂ ಒಂದೇ. ಎಷ್ಟೋ ವೇಳೆ ಸರಕಾರಕ್ಕೆ ಶ್ರಮರೂಪದಿಂದ ಬರುವ ಕರವು ಹಣರೂಪದಿಂದ ಬರುವುದಕ್ಕಿಂತ ಹೆಚ್ಚು ಬೆಲೆಯುಳ್ಳದ್ದಾಗುವುದು. ಶ್ರಮರೂಪದಿಂದ ಕರ ತೆರುವುದು ಜನತೆಯನ್ನು ಗಟ್ಟಿಮುಟ್ಟಾಗಿಸುತ್ತದೆ ಸಮಾಜದ ಸಲುವಾಗಿ ಯಾರು ತಾವಾಗಿಯೇ ಶ್ರಮಿಸುತ್ತಾರೋ ಅವರಿಗೆ ಶ್ರಮದ ಬದಲಾಗಿ ಹಣ ಬೇಕೆನಿಸುವುದಿಲ್ಲ. ಕರವನ್ನು ಕೂಡಿಸುವ ಮತ್ತು ಲೆಕ್ಕವನ್ನಿಡುವ ಕೆಲಸವು ಕಡಮೆಯಾಗುವುದಲ್ಲದೆ, ಪ್ರತಿಫಲವೂ ಹಣದಷ್ಟೇ ಉಪಯುಕ್ತವೆನಿಸುವುದು.

ಜವಾಬ್ದಾರಿ ಸರಕಾರದಲ್ಲಿ ಅರಸನಿಂದ ಆಳಿನವರೆಗಿನ ಎಲ್ಲ ನಾಗರಿಕರೂ ಏಳಿಗೆ ಹೊಂದುವರು. ಅಹಿಂಸೆಯ ತಳಹದಿಯುಳ್ಳ ಸ್ವಾತಂತ್ರ್ಯದಲ್ಲಿ, ಯಾರು ಯಾರೊಬ್ಬನ ಶತ್ರುವೂ ಅಲ್ಲ; ಪ್ರತಿಯೊಬ್ಬನೂ ಸಾರ್ವತ್ರಿಕ ಹಿತಕ್ಕಾಗಿ ತನ್ನ ತನ್ನ ಭಾಗವನ್ನು ಸಲ್ಲಿಸುತ್ತಾನೆ. ಎಲ್ಲರೂ ಓದು ಬರೆಹ ಬಲ್ಲವರಾಗಿ, ತಮ್ಮ ತಮ್ಮ ಜ್ಞಾನಾಭಿವೃದ್ಧಿ ಮಾಡಿಕೊಳ್ಳುತ್ತಾರೆ. ರೋಗ ರುಜಿನಗಳು ಬಹಳ ಕಡಮೆಯಾಗುತ್ತವೆ; ಯಾರೊಬ್ಬನೂ

ನಿರ್ಧನಿಕ ಇಲ್ಲವೆ ನಿರ್ಗತಿಕನಾಗಿರುವುದಿಲ್ಲ. ಹಾಗೂ ಕೆಲಸ-ಮಾಡಬಯಸುವವನಿಗೆ ತಕ್ಕ ಕೆಲಸವು ಸಿಕ್ಕೇ ಸಿಗುತ್ತದೆ. ಸ್ವತಂತ್ರ ಸರಕಾರದ ಕೆಳಗೆ ಜೂಜು, ಕುಡಿತ, ವ್ಯಭಿಚಾರ ಅಥವಾ ವರ್ಗದ್ವೇಷಗಳಿಗೆ ಆಸ್ಪದವಿರುವುದಿಲ್ಲ. ಶ್ರೀಮಂತರು ತಮ್ಮ ಸಂಪತ್ತನ್ನು ಐಷಾರಾಮುಗಳಿಗಾಗಿ ಪೋಲು ಮಾಡದೆ ಬುದ್ಧಿವಂತಿಕೆಯಿಂದಲೂ, ಉಪಯುಕ್ತ ಕಾರ್ಯಕ್ಕಾಗಿಯೂ ಉಪಯೋಗಿಸುವರು. ಕೆಲವೇ ಜನರು ಸುಖಸಮೃದ್ಧಿಯಿಂದ ಅರಮನೆಯಂತಹ ಮಹಾಸೌಧಗಳಲ್ಲಿ ವಾಸಿಸುತ್ತ, ಕೋಟ್ಯಂತರ ಜನರು ಗಾಳಿಬೆಳಕಿಗೂ ಗತಿ ಇಲ್ಲದ ಗುಡಿಸಲುಗಳಲ್ಲಿ ವಾಸಿಸು-ವಂತಾಗಲೇಬಾರದು.

ಹಾಗೆಯೇ ಹಿಂದೂ-ಮುಸ್ಲಿಂ ಭೇದ ಭಾವವೂ, ಅಸ್ಪೃ-ಶ್ಯತೆಯೂ, ಮೇಲು-ಕೀಳು ಭಾವನೆಯೂ ಇರಲೇ ಕೂಡದು. ಅಹಿಂಸಾತ್ಮಕವಾದ ಸ್ವತಂತ್ರ ರಾಜ್ಯದಲ್ಲಿ ಜನತೆಯ ನ್ಯಾಯ-ವಾದ ಹಕ್ಕುಗಳ ಮೇಲೆ ಎಂದೂ ದಾಳಿಯಾಗಲಾರದು. ಅದರ ಬದಲು, ಯಾರೊಬ್ಬರೂ ಅನ್ಯಾಯವಾದ ಹಕ್ಕುಗಾರಿಕೆ ಉಳ್ಳವ-ರಾಗಲಾರರು. ಸುಸಂಘಟಿತವಾದ ರಾಜ್ಯದಲ್ಲಿ ಒಬ್ಬರು ಮತ್ತೊಬ್ಬರಿಂದ ಕಸಿದುಕೊಳ್ಳಲು ಶಕ್ಯವಾಗದು. ಹಾಗೂ ಕಸಿದವರನ್ನು ದಂಡಿಸಲು ಬಲಪ್ರಯೋಗಮಾಡುವ ಅಗತ್ಯವೂ ಇರಲಾಗದು.

(ಹ. ೧೯೩೯)

# ಸ್ವರಾಜ್ಯದಲ್ಲಿ ಅರಸೊತ್ತಿಗೆಯ ಕರ್ತವ್ಯ

ನನ್ನ ಕಲ್ಪನೆಯ ಸ್ವರಾಜ್ಯದಲ್ಲಿ ಅರಸೊತ್ತಿಗೆಯು ಅಂತ್ಯವಿಲ್ಲ. ಸ್ವರಾಜ್ಯವು ಸಕಲ ಅನಿಷ್ಟಗಳಿಗೂ ಒಂದು ದಿವ್ಯ ಔಷಧವೆಂಬ ದೃಢವಾದ ನಂಬಿಗೆಯಿಂದಲೇ ನಾನು ಸ್ವರಾಜ್ಯ ಚಳವಳಿಯಲ್ಲಿ ನನ್ನ ಸರ್ವಸ್ವವನ್ನು ತೊಡಗಿಸಿದ್ದೇನೆ. ಸೂರ್ಯೋದಯವಾಗುತ್ತಲೇ ಕತ್ತಲೆಯು ಮಾಯವಾಗುವಂತೆ, ಸ್ವರಾಜ್ಯೋದಯವಾಗುತ್ತಲೇ ಅರಸರ ಮತ್ತು ಪ್ರಜೆಗಳ ಅನಾಯಕತ್ವವೆಂಬ ಕತ್ತಲೆಯು ನಿಮಿಷಮಾತ್ರದಲ್ಲಿಯೇ ಮಾಯವಾಗುವುದು. ಅರಸೊತ್ತಿಗೆಗೆ ನೈತಿಕ ತಳಹದಿ ಏನಾದರೂ ಇರುವುದಾದರೆ, ಅರಸರು ತಾವು ಪಡೆಯುವ ಕರಕಂದಾಯಗಳ ಸ್ವತಂತ್ರ ಒಡೆಯರಲ್ಲ; ಅವರು ಅವುಗಳ ಧರ್ಮದರ್ಶಿಗಳು, ಆದ್ದರಿಂದ ಅದನ್ನವರು ಧರ್ಮನಿಧಿಯೆಂದೇ ಬಗೆದು ವೆಚ್ಚಮಾಡುವರು. ಇಂಗ್ಲೀಷರ ರಾಜ್ಯಘಟನೆಯು ಈ ತತ್ತ್ವದ ಪ್ರತ್ಯಕ್ಷ ಕಾರ್ಯಾಚರಣೆಯಾಗಿದೆ ಎನ್ನಬಹುದು. ಅಬುಬಕರ್ ಮತ್ತು ಹಜ್ರತ್ ಉಮರರು ಕೋಟಿಗಟ್ಟಳೆ ಹಣವನ್ನು ವಸೂಲು ಮಾಡುತ್ತಿದ್ದರೂ ಅವರು ಭಿಕಾರಿಗಳಂತೆಯೇ ಇರುತ್ತಿದರು. ಸಾರ್ವಜನಿಕರ ಈ ಹಣದಿಂದ ಒಂದು ಕಾಸನ್ನಾದರೂ ಅವರು ಸ್ವಂತಕ್ಕೆ ಉಪಯೋಗಿಸುತ್ತಿದ್ದಿಲ್ಲ. ಜನತೆಗೆ ಅನ್ಯಾಯವಾಗದಂತೆ ಅವರು

ಸದಾ ಎಚ್ಚತ್ತುಕೊಂಡೇ ಇರುತ್ತಿದ್ದರು. ಹಗೆಗಳಿಗೂ ಕೂಡಾ ಅನ್ಯಾಯವಾಗಕೂಡದು ಎಂಬುದೇ ಅವರ ತತ್ತ್ವವಾಗಿದ್ದಿತು.

ಆ ತತ್ತ್ವವನ್ನು ನಾನು ಒಪ್ಪುತ್ತೇನೆ ಹಾಗೂ ಅದರ ಅನುಷ್ಠಾನದಿಂದಲೇ ಜನಸೇವಕರ ಅರಸನಾಗುತ್ತೇನೆ. ಪ್ರಜೆಗಳೇ ನಿಜವಾದ ಒಡೆಯರು, ಯಜಮಾನರು. ಆದರೆ, ಜನತೆಯೆಂಬ ಆ ಯಜಮಾನನೇ ನಿದ್ರೆಮಾಡಿದರೆ, ಸೇವಕನೇನುಮಾಡಬೇಕು? ಆದ್ದರಿಂದ, ನಿಜವಾದ ರಾಷ್ಟ್ರೀಯ ಜಾಗ್ರತಿಯನ್ನುಂಟುಮಾಡುವ ಪ್ರಯತ್ನದಲ್ಲಿ ಎಲ್ಲವೂ ಸೇರಿರುತ್ತದೆ.

ಇದು ನನ್ನ ಆದರ್ಶವಾಗಿರುವುದರಿಂದ ನನ್ನ ಕಲ್ಪನೆಯ ಸ್ವಾತಂತ್ರ್ಯದಲ್ಲಿ ದೇಶೀ ಸಂಸ್ಥಾನಗಳಿಗೂ ಸ್ಥಾನವಿರುತ್ತದಲ್ಲದೆ, ಪ್ರಜೆಗಳ ಹಕ್ಕು ಬಾಧ್ಯತೆಗಳಿಗೆ ಪೂರ್ಣ ರಕ್ಷಣೆಯೂ ಇರುತ್ತದೆ ಕರ್ತವ್ಯ ಪಾಲನೆಯೇ ಹಕ್ಕು ಬಾಧ್ಯತೆಗಳ ಮೂಲ. ಆದ್ದರಿಂದಲೇ ನಾನು ಅರಸರ ಮತ್ತು ಪ್ರಜೆಗಳ ಕರ್ತವ್ಯಗಳೇ-ನೆಂಬುದನ್ನು ಹೇಳುತ್ತಿದ್ದೇನೆ. ಸಂಸ್ಥಾನಗಳಿಗೆ ಯಾವ ಬಗೆಯ ರಾಜ್ಯಘಟನೆ ಇರಬೇಕೆಂಬುದನ್ನು ನಾನು ಪ್ರಸ್ತಾಪಿಸುವುದಿಲ್ಲ ಅದನ್ನು ನೀವೇ ನಿರ್ಧರಿಸಿಕೊಳ್ಳಬೇಕು ಜನಾಂಗವು ತನ್ನ ಧ್ಯೇಯವನ್ನು ಸಾಧಿಸಿಕೊಳ್ಳಲು ಶಕ್ತಿಸಂಪನ್ನವಾಗಬೇಕು. ಹಾಗೂ ಅದನ್ನು ಪಡೆಯುವ ದಾರಿಯಾವುದು ಎಂಬುದನ್ನು ಕಂಡುಹಿಡಿಯುವುದೇ ನನ್ನ ಕರ್ತವ್ಯವಾಗಿದೆ. ಜನಾಂಗಕ್ಕೆ ತನ್ನ ಶಕ್ತಿಯು ಅರಿವಾಗುತ್ತಲೇ ಅದು ತನ್ನ ಗುರಿಯನ್ನು ಮುಟ್ಟುವ ರೀತಿಯನ್ನು ತಾನೇ ಕಂಡುಕೊಳ್ಳುವುದು.

(ಯ. ಇ. ೧೯-೨೫)

## ಎಲ್ಲ ಅಧಿಕಾರಗಳೂ ರೈತರಿಗೆ ಸೇರಿರಬೇಕು

ಸೋವಿಯಟ್ ರಶಿಯಾದ ಪರಿಸ್ಥಿತಿ ನನಗೆ ಗೊತ್ತಿಲ್ಲ. ಆದರೆ, ನಮಗೆ ಪ್ರಜಾಪ್ರಭುತ್ವ ಪದ್ಧತಿಯ ಸ್ವರಾಜ್ಯ ದೊರೆಯುವು-ದಾದರೆ ನಾವದನ್ನು ಅಹಿಂಸೆಯಿಂದಲೇ ಪಡೆಯಬೇಕು, ಹಾಗೂ ಅದರಲ್ಲಿ ರಾಜಕೀಯ ಅಧಿಕಾರ ಸಹಿತವಾಗಿ ಎಲ್ಲ ಅಧಿಕಾರ-ಗಳೂ ರೈತರ ಕೈಯಲ್ಲಿಯೇ ಇರಬೇಕು ಎಂಬುದೇ ನನ್ನ ಅಭಿಪ್ರಾಯ.

(ಪತ್ರಿಕಾ ವರದಿ ೧೯೪೪)

---

## ಎಲ್ಲ ವೃತ್ತಿಗಳಿಗೂ ಸಮಾನ ಪ್ರತಿಫಲ

ಭಾರತದ ಸ್ವಾತಂತ್ರ್ಯವು ಜಗತ್ತಿಗೆ ಒಂದು ಆದರ್ಶವೆನಿಸ-ಬೇಕಾದರೆ, ಭಂಗಿಗಳೂ, ಡಾಕ್ಟರುಗಳೂ, ವಕೀಲರೂ, ಶಿಕ್ಷಕರೂ ವ್ಯಾಪಾರಿಗಳೂ, ಎಲ್ಲ ವೃತ್ತಿಗಳವರೂ, ತಮ್ಮ ತಮ್ಮ ದಿನದ ದುಡಿತಗಳಿಗೆ ಒಂದೇ ಮಟ್ಟದ ಪ್ರತಿಫಲವನ್ನು ಪಡೆಯುವಂತಾಗ-ಬೇಕು. ಈ ಗುರಿಯನ್ನು ಭಾರತೀಯ ಸಮಾಜವು ಸಂಪೂರ್ಣ-

ಈ ಪ್ರಕಟನೆಗಳಲ್ಲಿಯ ಮೊದಲಿನ ಮಾಲಿಕೆಯಲ್ಲಿ ಹೆಚ್ಚು ಸರಳವಾದ ಪ್ರತಿಪಾದನೆಯ ಕಡೆಗೆ ಲಕ್ಷ್ಯವನ್ನು ಪೂರೈಸಿದ್ದರೆ, ಜೇಬಿನಾವೃತ್ತಿಯಲ್ಲಿ ಆ ಆ ವಿಷಯಗಳ ಬಗೆಗೆ ಗಾಂಧಿ ವಿಚಾರ ಸಾರವು ನೆನಪಿನಲ್ಲಿ ಉಳಿಯುವಂತೆ ಸೂತ್ರಬದ್ಧವಾಗಿ ವಿಷಯಗಳನ್ನು ಕೊಡಲಾಗಿದೆ.

ಮೊದಲಿನ 'ಜನಪ್ರಿಯ' ಆವೃತ್ತಿಯಲ್ಲಿ ಈಗಾಗಲೇ "ಮಹಿಳೆಯರು" "ಒಳ್ಳೆಯ ಜೀವನ" "ಅಸ್ಪೃಶ್ಯತೆ" "ಸತ್ಯ" "ಸರ್ವೋದಯ" "ವಿದ್ಯಾರ್ಥಿಗಳು" "ಖಾದಿ–ಗ್ರಾಮೋದ್ಯೋಗ" "ನನ್ನ ಬಾಲ್ಯದ ನೆನಹುಗಳು" ಮತ್ತು "ಪ್ರಾರ್ಥನೆ" ಎಂಬ ಪುಸ್ತಕಗಳು ಪ್ರಕಟವಾಗಿವೆ.

ಶಿಕ್ಷಣ ಮತ್ತು ಇತರ ವಿಧಾಯಕ ಕಾರ್ಯಕ್ಷೇತ್ರಗಳಲ್ಲಿ ಇಂದು ಗಾಂಧಿವಿಚಾರದ ತಿಳಿವಳಿಕೆ ಮತ್ತು ಅನುಷ್ಠಾನದ ಆವಶ್ಯಕತೆ ಎಷ್ಟಿದೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಇಂಥ ವಿಚಾರಗಳಲ್ಲಿ ಆಸಕ್ತಿಯುಳ್ಳ ಶಿಕ್ಷಣ ಸಂಸ್ಥೆಗಳು, ವಯಸ್ಕರ ಶಿಕ್ಷಣ ಸಂಸ್ಥೆಗಳು, ಹಳ್ಳಿ ಮತ್ತು ಪಟ್ಟಣಗಳಲ್ಲಿಯ ವಾಚನಾಲಯಗಳು ಮತ್ತು ವಿಧಾಯಕ ಕಾರ್ಯಕರ್ತರು ಈ ಪ್ರಕಟನೆಗಳನ್ನು ಸ್ವಾಗತಿಸುವುದಾಗಿ ನಂಬಿದ್ದೇವೆ.

ಧಾರವಾಡ — ಡಾ. ಆರ್. ಹುಕ್ಕೇರಿಕರ

೨-೧೦-೧೯೬೦ — ಅಧ್ಯಕ್ಷ

ಗಾಂಧಿ ಜಯಂತಿ — [illegible]

# ಸ್ವಾತಂತ್ರ್ಯ

## ಭಾರತದ ಸ್ವಾತಂತ್ರ್ಯ

ನನಗೆ ನನ್ನ ದೇಶದ ಸ್ವಾತಂತ್ರ್ಯ ಬೇಕು. ಅದರಿಂದ ಅನ್ಯರಾಷ್ಟ್ರಗಳು ಕಲಿತುಕೊಳ್ಳುವಂತಾಗಬೇಕು. ನನ್ನ ದೇಶದ ಸಂಪತ್ತನ್ನು ಮಾನವ ಕೋಟಿಯ ಹಿತಕ್ಕಾಗಿ ಉಪಯೋಗಿಸುವಂತಾಗಬೇಕು.

ವ್ಯಕ್ತಿಯು ಕುಟುಂಬಕ್ಕಾಗಿ, ಕುಟುಂಬವು ಗ್ರಾಮಕ್ಕಾಗಿ, ಗ್ರಾಮವು ಜಿಲ್ಲೆಗಾಗಿ, ಜಿಲ್ಲೆಯು ಪ್ರಾಂತ್ಯಕ್ಕಾಗಿ ಮತ್ತು ಪ್ರಾಂತ್ಯವು ದೇಶಕ್ಕಾಗಿ ಪ್ರಾಣಾರ್ಪಣ ಮಾಡಲು ಸಿದ್ಧವಾಗಿರಬೇಕೆಂಬ ತತ್ತ್ವವನ್ನು ಸ್ವದೇಶ ಭಕ್ತಿಯು ಹೇಗೆ ಕಲಿಸುವುದೋ ಹಾಗೆ ಒಂದು ದೇಶವು, ಅವಶ್ಯಬಿದ್ದರೆ, ಇಡೀ ಜಗತ್ತಿನ ಹಿತಕ್ಕಾಗಿ ಸಾಯಲು ಸಿದ್ಧವಾಗಲಿಕ್ಕಾಗಿಯೇ ಅದು ಸ್ವತಂತ್ರವಾಗಿರಬೇಕು. ಆದ್ದರಿಂದಲೇ ನಾನು ರಾಷ್ಟ್ರೀಯತೆಯನ್ನು ಪ್ರೀತಿಸುತ್ತಿದ್ದೇನೆ. ನನ್ನ ದೇಶವು ಸ್ವತಂತ್ರವಾಗಿ, ಅವಶ್ಯಬಿದ್ದರೆ

ಮಾನವ ಜನಾಂಗದ ಉಳಿವಿಗಾಗಿ ತನ್ನನ್ನು ಬಲಿಕೊಡಲಿಕ್ಕೂ ಸಿದ್ಧವಾಗಿರಬೇಕೆಂಬುದೇ ನನ್ನ ರಾಷ್ಟ್ರೀಯತೆಯ ಕಲ್ಪನೆಯಾಗಿದೆ. ಅದರಲ್ಲಿ ವರ್ಣದ್ವೇಷ, ಕುಲದ್ವೇಷಗಳಿಗೆ ಸ್ಥಾನವಿಲ್ಲ. ಅದೇ ನಮ್ಮ ರಾಷ್ಟ್ರೀಯತೆಯಾಗಿರಲಿ.

(ಯಂ. ಇ. ೧೯೨೧)

---

# ಮಾನವಲೋಕಕ್ಕೇ ಹೊಸ ಸಂದೇಶ

ಯುರೋಪಿಗೆ ಸಾಷ್ಟಾಂಗ ನಮಸ್ಕಾರ ಹಾಕುವ ಭಾರತವು ಮಾನವಲೋಕಕ್ಕೆ ಯಾವ ಆಶಾದಾಯಕ ಸಂದೇಶವನ್ನೂ ಕೊಡಲಾರದು. ಎಚ್ಚೆತ್ತು ಸ್ವತಂತ್ರವಾದ ಭಾರತವು ನೋವಿನಿಂದ ನರಳುತ್ತಿರುವ ಜಗತ್ತಿಗೆ ಶಾಂತಿ ಸೌಹಾರ್ದತೆಯ ಸಂದೇಶವನ್ನು ಕೊಡಬಲ್ಲದು.

× × ×

ಮಾನವಲೋಕದ ಸಲುವಾಗಿ ಪ್ರಾಣಾರ್ಪಣಮಾಡಲು ಮುಂದಾಗುವಂತೆ, ಭಾರತವು ಮೊತ್ತಮೊದಲು ತಾನು ಬರುವಂತಾಗಬೇಕು. ಸ್ವತಂತ್ರ ಭಾರತವು ಮಾನವ ಜಗತ್ತಿನ ಹಿತದ ಸಲುವಾಗಿ ತಾನಾಗಿಯೇ ತನ್ನನ್ನೊಂದು ಪವಿತ್ರವಾದ ಬಲಿಯನ್ನಾಗಿ ಅರ್ಪಿಸುವುದನ್ನು ನಾನು ನೋಡಲಿಚ್ಛಿಸುತ್ತೇನೆ.

× + ×

ಭಾರತದ ಸ್ವಾತಂತ್ರ್ಯವು ಶಾಂತಿ ಮತ್ತು ಸಮರದ ಬಗೆಗೆ ಜಗತ್ತಿನ ಅಭಿಪ್ರಾಯದಲ್ಲಿಯೇ ಒಂದು ಕ್ರಾಂತಿಯನ್ನುಂಟುಮಾಡಬೇಕು. ಭಾರತದ ಅಸಹಾಯ ಸ್ಥಿತಿಯು ಮಾನವಲೋಕದ ಮೇಲೆ ಪರಿಣಾಮಮಾಡದೇ ಇರುವದಿಲ್ಲ.

× × ×

ನನ್ನ ಆಕಾಂಕ್ಷೆಯು ಸ್ವಾತಂತ್ರ್ಯಕ್ಕಿಂತಲೂ ಮೇಲಿನ-ದಾಗಿದೆ. ಭಾರತದ ವಿಮೋಚನೆಯಮೂಲಕ ನಾನು ಪಾಶ್ಚಿಮಾತ್ಯರ ಶೋಷಣೆಯಿಂದ ತುಳಿಯಲ್ಪಟ್ಟಿರುವ ಎಲ್ಲ ದುರ್ಬಲ ಜನಾಂಗಗಳನ್ನೂ ಗುಲಾಮಗಿರಿಯಿಂದ ಬಿಡುಗಡೆಮಾಡಲು ಹಾದಿಕಾಯುತ್ತಿದ್ದೇನೆ.

(ದಿ ಮೈಂಡ್ ಆಫ್ ಮಹಾತ್ಮಾ ಗಾಂಧಿ ಪು ೧೬೮–೧೬೯)

— —

# ಭಾರತದ ಸ್ವಾತಂತ್ರ್ಯಕ್ಕೆ ಯಾರೂ ಅಂಜಬೇಕಿಲ್ಲ

ಸ್ವತಂತ್ರ ಭಾರತದಲ್ಲಿ ತಮ್ಮ ಪರಿಸ್ಥಿತಿ ಹೇಗಾಗುವುದೋ ಎಂಬುವ ಜನರನ್ನು ಕಂಡು ನನಗೆ ನೋವೂ ಆಶ್ಚರ್ಯವೂ ಆಗುತ್ತದೆ. ನನ್ನಮಟ್ಟಿಗೆ ಹೇಳುವುದಾದರೆ, ಭಾರತದ ಕೃತ್ರಿಮ ಗಡಿಯೊಳಗಷ್ಟೇ ಅಲ್ಲದೆ ಅದರ ಪ್ರಾಕೃತಿಕ ಗಡಿಯೊಳಗೆ ಜನಿಸಿರುವ ಅತ್ಯಂತ ಕೆಳತರಗತಿಯ ವ್ಯಕ್ತಿಗೂ ಸ್ವಾತಂತ್ರ್ಯವನ್ನು ಕೊಡದಿದ್ದರೆ, ನನಗಿದು ಭಾರತದ ಸ್ವಾತಂತ್ರ್ಯವೆನಿಸಲಾರದು. ಭಯವು ಶಕ್ತಿಯನ್ನು ಉಡುಗಿಸುತ್ತದೆ... ಶೋಷಕರು, ಹಣಸುಲಿಯುವವರು, ದರೋಡೆಖೋರರು ಮತ್ತು ಅವರಂಥ ಇತರ ಜನರು ಮಾತ್ರವೇ ಭಾರತದ ಸ್ವಾತಂತ್ರ್ಯದ ಬಗ್ಗೆ ಭಯ ಪಡುವರು.

ನಾನು ಬಹು ವಿನಯಪೂರ್ವಕವಾಗಿ ಸೂಚಿಸುವುದೇನೆಂದರೆ:—ಭಾರತವು ಸತ್ಯ ಮತ್ತು ಅಹಿಂಸೆಯಿಂದ ಸ್ವಾತಂತ್ರ್ಯವನ್ನು ಪಡೆದರೆ, ಅದು ಶಾಂತಿಗಾಗಿ ಪರಿತಪಿಸುತ್ತಿರುವ ಇಡೀ ಜಗತ್ತಿಗೇ ದೊಡ್ಡದೊಂದು ಕೊಡುಗೆಯನ್ನು ಕೊಟ್ಟಂತಾಗುವುದು. ಹಾಗೂ, ಅದರಿಂದ ಭಾರತವು ಅನ್ಯ ಜನಾಂಗಗಳಿಂದ ಪಡೆದ ಸಹಾಯಕ್ಕೆ ತುಸುವಾದರೂ ಪ್ರತಿಯಾಗಿ ಸಹಾಯ ಸಲ್ಲಿಸಿದಂತಾಗುವುದು.

(ಮೈಂಡ್ ಆಫ್ ಮಹಾತ್ಮಾ ಗಾಂಧಿ ಪು. ೧೭೦)

# ಸ್ವತಂತ್ರ ಭಾರತದ ಘಟನೆ

ಸ್ವರಾಜ್ಯವೆಂದರೆ, ಶರೀರಶ್ರಮದಿಂದ ರಾಷ್ಟ್ರಕ್ಕೆ ಸೇವೆ ಸಲ್ಲಿಸುತ್ತಿರುವ ಹಾಗೂ ತಮ್ಮ ಹೆಸರುಗಳನ್ನು ಮತದಾರರ ಯಾದಿಗಳಲ್ಲಿ ನೊಂದಾಯಿಸಿಕೊಂಡಿರುವ, ಸಕಲ ಪ್ರೌಢ ಸ್ತ್ರೀ-ಪುರುಷರ ಬಹುಮತಾಭಿಪ್ರಾಯದಂತೆ ನಡೆದುಕೊಳ್ಳುವ ಸರಕಾರ. ಕೆಲವೇ ಜನರ ಕೈಯಲ್ಲಿ ಅಧಿಕಾರವಿರುವುದು ನಿಜವಾದ ಸ್ವರಾಜ್ಯವಲ್ಲವೆಂಬುದನ್ನೂ, ಅಧಿಕಾರದ ದುರುಪಯೋಗವಾದಾಗ ಅದನ್ನು ಇದಿರಿಸುವ ಸಾಮರ್ಥ್ಯವನ್ನು ಪಡೆಯುವುದೇ ನಿಜವಾದ ಸ್ವರಾಜ್ಯವೆಂಬುದನ್ನೂ ನಾನು ಸಿದ್ಧ ಮಾಡಿತೋರಲು ಆಶಿಸುತ್ತೇನೆ. ಅಧಿಕಾರವನ್ನು ನಿಯಂತ್ರಿಸಿ, ಅದನ್ನು ಸರಿಯಾಗಿ ಚಲಾಯಿಸುವಂತೆ ಜನತೆಯಲ್ಲಿ ಜ್ಞಾನಪ್ರಸಾರಮಾಡಿ, ಅವರಲ್ಲಿ ಆ ಸಾಮರ್ಥ್ಯವನ್ನುಂಟುಮಾಡಿಕೊಡುವುದೇ ನಿಜವಾದ ಸ್ವರಾಜ್ಯ.

(ಯ. ಇ. ೧೯-೨೫)



# ಜನತೆಯ ಹೊಣೆಗಾರಿಕೆಯೇ ಸ್ವಾತಂತ್ರ್ಯ

ಇಂಗ್ಲೀಷರು ತಮ್ಮ ದೇಶಕ್ಕೆ ಹಿಂತಿರುಗಿ ಹೋಗುವುದೇ ಸ್ವಾತಂತ್ರ್ಯವಲ್ಲ ಹಳ್ಳಿಗಾಡಿನ ಸಾಮಾನ್ಯ ಜನತೆಯು ತನ್ನ ಭವಿತವ್ಯಕ್ಕೆ ತಾನೇ ಹೊಣೆ ಎಂಬುದನ್ನರಿತುಕೊಂಡು, ತನ್ನ ಪ್ರತಿನಿಧಿಗಳ ಮೂಲಕ ತನಗೆ ಬೇಕಾದ ಕಾಯಿದೆ ಕಾನೂನು-ಗಳನ್ನು ರಚಿಸಿಕೊಳ್ಳುವಂತಾಗುವುದೇ ಸಾತಂತ್ರ್ಯ.

(ಯ. ಇ. ೧೯೩೦)

× × ×

ನನ್ನ ಪ್ರಕಾರ "ಭಾರತೀಯ ಸ್ವಾತಂತ್ರ್ಯ"ವೆಂದರೆ ಜನತೆಯ ಆಳಿಕೆ, ನ್ಯಾಯಬದ್ಧವಾದ ಆಳಿಕೆ. ಪೂರ್ಣ ಸ್ವಾತಂತ್ರ್ಯವೆಂದರೇನೆಂಬ ಬಗೆಗೆ ಯಾವ ತಪ್ಪು ಗ್ರಹಿಕೆಯೂ ಆಗದಿರಲಿ. ದುಡಿಯುತ್ತಿರುವ ಲಕ್ಷಾಂತರ ಜನತೆಗೆ ಆರ್ಥಿಕ ಸ್ವಾತಂತ್ರ್ಯ ಸಿಗುವುದೇ ಪೂರ್ಣ ಸ್ವಾತಂತ್ರ್ಯ.

(ಯ. ಇ. ೧೯೩೧)

× × ×

ಆದ್ದರಿಂದ ಅದರ ಉದ್ದೇಶವನ್ನು ನಾನು ಸ್ಪಷ್ಟಪಡಿಸು-ತ್ತೇನೆ— ಸ್ವಾತಂತ್ರ್ಯವೆಂದರೆ, ಪರದಾಸ್ಯದಿಂದ ಎಲ್ಲ ರೀತಿ-

ಯಿಂದಲೂ ಬಿಡುಗಡೆಹೊಂದುವುದು, ಹಾಗೂ ಮೂಕ ಜನತೆಯು ಸಲುವಾಗಿಯೇ ಬಿಡುಗಡೆ ಹೊಂದುವುದು. ಈ ಉದ್ದೇಶವನ್ನು ಇದಿರಿಸುವವರೆಲ್ಲರೂ ತಮ್ಮ ಧೋರಣೆಯನ್ನು ಬದಲಾಯಿಸಿ-ಕೊಳ್ಳತಕ್ಕದ್ದು. ಅದು ಸಾಧ್ಯವಾಗದಿದ್ದರೆ, ಹಿಮ್ಮೆಟ್ಟಿ ಹೋಗ-ತಕ್ಕದ್ದು.

(ಯ. ಇ. ೧೯೩೧)

---

## ಅಸ್ವತಂತ್ರತೆಗಿಂತ ಮರಣವೇ ಲೇಸು

ಸ್ವತಂತ್ರ ಸ್ತ್ರೀ-ಪುರುಷರಾಗಿ ನಾವು ಬಾಳಲಾರೆವಾದರೆ, ಮರಣವೇಲೇಸೆನ್ನಲು ಹಿಂಜರಿಯಬಾರದು.

(ಯ. ಇ. ೧೯೨೨)

---

## ಸ್ವಾತಂತ್ರ್ಯವು ಬಾಳಿನುಸಿರು

ಪ್ರತಿಯೊಂದು ದೇಶವೂ ಉಣ್ಣಲಿಕ್ಕೆ, ತಿನ್ನಲಿಕ್ಕೆ, ಕುಡಿಯು-ಲಿಕ್ಕೆ, ಉಸಿರೆಳೆಯಲಿಕ್ಕೆ ಅರ್ಹತೆಯುಳ್ಳದ್ದಾಗಿರುವಂತೆಯೇ ಪ್ರತಿ-ಯೊಂದು ಜನಾಂಗವೂ—ಎಷ್ಟೇ ಅಸಮರ್ಪಕವಾಗಿಯಾದರೂ—ತನ್ನನ್ನು ತಾನೇ ಆಳಿಕೊಳ್ಳುವ ಸ್ವಾತಂತ್ರ್ಯಕ್ಕೆ ಅರ್ಹವಾಗಿದೆ.

(ಯ. ಇ. ೧೯೩೧)

---

## ಸ್ವಾತಂತ್ರ್ಯಕ್ಕೆ ಸಾವಕಾಶ ಸಲ್ಲದು

'ಸಾವಕಾಶ ಸ್ವಾತಂತ್ರ್ಯ' ಎಂಬ ವಸ್ತುವಿಲ್ಲ ಸ್ವಾತಂತ್ರ್ಯವು ಹೆರಿಗೆಯಂತಿದೆ ನಾವು ಪೂರ್ಣ ಸ್ವತಂತ್ರರಾಗುವವರೆಗೆ ಗುಲಾಮರೇ ಸರಿ. ಹೆರಿಗೆಯೆಂಬುದೆಲ್ಲವೂ ಒಂದೇ ನಿಮಿಷದಲ್ಲಾಗುತ್ತದೆ.

(ಯ. ಇ. ೧೯-೨೯)

---

## ಸ್ವಾತಂತ್ರ್ಯವು ದಾನ ವಸ್ತುವಲ್ಲ

ಸ್ವಾತಂತ್ರ್ಯವು ಎಂದಿಗೂ ಒಂದು ಜನಾಂಗವು ಇನ್ನೊಂದು ಜನಾಂಗಕ್ಕೆ ತಾನಾಗಿಯೇ ಕೊಡುವ ದಾನವಸ್ತುವಾಗಲಾರದು. ಜನಾಂಗವು ತನ್ನ ಪವಿತ್ರ ರಕ್ತವನ್ನು ಕೊಟ್ಟು ಕೊಳ್ಳುವ ಭಂಡಾರವದು. ಅಪರಿಮಿತವಾದ ಕಷ್ಟಗಳನ್ನು ಅನುಭವಿಸುತ್ತ ನಿರಂತರ ಶ್ರಮಿಸುವುದರಿಂದಲೇ ಸ್ವಾತಂತ್ರ್ಯವೆಂಬ ಫಲವು ದೊರಕುತ್ತದೆ.

(ಯ. ಇ. ೧೯-೨೨)

# ನನ್ನ ಕಲ್ಪನೆಯ ಸ್ವಾತಂತ್ರ್ಯ

ನನ್ನ ಕಲ್ಪನೆಯ ಸ್ವರಾಜ್ಯದ ಬಗೆಗೆ ಯಾವ ತಪ್ಪು ತಿಳಿವಳಿಕೆಯೂ ಆಗದಿರಲಿ—ಪರದಾಸ್ಯದಿಂದ ಸಂಪೂರ್ಣ ಬಿಡುಗಡೆ ಹೊಂದುವುದು ಹಾಗೂ ಆರ್ಥಿಕವಾಗಿ ಪೂರ್ಣ ಸ್ವತಂತ್ರವಾಗುವುದೇ ಸ್ವರಾಜ್ಯ. ಹೀಗೆ, ಇದರ ಒಂದು ಅಂಚು ರಾಜಕೀಯ ಸ್ವಾತಂತ್ರ್ಯವಾಗಿದ್ದು, ಮತ್ತೊಂದು ಅಂಚು ಆರ್ಥಿಕ ಸ್ವಾತಂತ್ರ್ಯವಾಗಿದ್ದರೆ, ಅದಕ್ಕೆ ಇನ್ನೂ ಎರಡು ಅಂಚುಗಳುಂಟು. ಅವುಗಳಲ್ಲೊಂದು ಅಂಚೆಂದರೆ ನೈತಿಕ ಮತ್ತು ಸಾಮಾಜಿಕ, ಅರ್ಥಾತ್ ಅತ್ಯಂತ ಶ್ರೇಷ್ಠ ಮತವೆನಿಸಿದ ಧರ್ಮವಾಗಿದೆ. ಈ ಧರ್ಮವು ಹಿಂದೂ, ಮುಸ್ಲಿಂ, ಕ್ರೈಸ್ತ ಮೊದಲಾದ ಮತಗಳನ್ನೆಲ್ಲ ಒಳಗೊಂಡಿದ್ದು, ಅವೆಲ್ಲಕ್ಕೂ ಮೇಲಿನದಾಗಿದೆ. ಅದನ್ನು 'ಸತ್ಯಧರ್ಮ' ಎಂಬ ಹೆಸರಿನಿಂದ ಗುರುತಿಸಿಕೊಳ್ಳಬೇಕು. ಅದು ಯಾವ ಬದಲಾವಣೆಗೂ ನಾಶಕ್ಕೂ ಒಳಗಾಗದೆ ಸರ್ವವ್ಯಾಪಿಯಾಗಿದೆ. ನೈತಿಕ ಮತ್ತು ಸಾಮಾಜಿಕ ಉದ್ಧಾರಕ್ಕೆ 'ಅಹಿಂಸೆ' ಎಂದು ಕರೆಯಬಹುದು. ಹೀಗೆ ನನ್ನ ಕಲ್ಪನೆಯ ಸ್ವಾತಂತ್ರ್ಯವು ನಾಲ್ಕು ಅಂಚುಗಳುಳ್ಳ ಒಂದು 'ಚಚೌಕ'ದಂತಿದೆ ಎನ್ನಬಹುದು. ಅದರ ಯಾವುದೊಂದೇ ಅಂಚು ಅಥವಾ ತುದಿಯು ಸರಿಯಾಗಿಲ್ಲದೆ ಹೋದರೆ, ಚಚೌಕವು ಕೆಟ್ಟು ಹೋಗುವುದು. ಸತ್ಯ ಮತ್ತು ಅಹಿಂಸೆಯನ್ನು ಆಚರಣೆಗೆ

ತಾರದೆ, ದೇವರಲ್ಲಿ ನಿಜವಾದ ಶ್ರದ್ಧೆ ಇಡದೆ ನಡೆದರೆ, ಈ ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯವನ್ನೂ, ತನ್ಮೂಲಕವಾಗಿ, ನೈತಿಕ ಮತ್ತು ಸಾಮಾಜಿಕ ಉದ್ಧಾರವನ್ನೂ ಸಾಧಿಸಲಾರೆವು.

ಬ್ರಿಟಿಷ್ ಪಾರ್ಲಿಮೆಂಟಿನ ಅನುಕರಣೆಯಾಗಲೀ, ರಶಿಯಾದ ಸೋವಿಯೆಟ್ ರಾಜ್ಯ, ಇಟಲಿಯ ಫೇಸಿಸ್ಟ್ ಆಳಿಕೆ ಇಲ್ಲವೆ ಜರ್ಮನಿಯ ನಾಝಿ ಪದ್ಧತಿಯ ಅನುಕರಣೆಯಾಗಲೀ ನನ್ನ ಕಲ್ಪನೆಯ ರಾಜಕೀಯ ಸ್ವಾತಂತ್ರ್ಯವಾಗಲಾರದು. ಅವೆಲ್ಲ ಅವರ ಅಭಿರುಚಿಗೆ ತಕ್ಕುದಾದ ಪದ್ಧತಿ ಇರಬೇಕು. ಅವರದೇನಿರಬೇಕೆಂಬುದನ್ನು ನಾನು ಹೇಳಲಾರೆನು. ಆದರೂ, "ನೀತಿವಂತನೇ ಬಲವಂತ'ನೆಂಬ ನೈತಿಕ ಶಕ್ತಿಯ ಆಧಾರದಮೇಲೆ ರಚಿತವಾದ ಜನತಾ ಸರಕಾರವೇ "ರಾಮರಾಜ್ಯ"ವೆಂದು ನಾನು ಬಣ್ಣಿಸಿದ್ದೇನೆ.

ಹಾಗೆಯೇ ಆರ್ಥಿಕ ಸ್ವಾತಂತ್ರ್ಯವನ್ನಷ್ಟು ನೋಡೋಣ. ಆಧುನಿಕ ಪಾಶ್ಚಿಮಾತ್ಯ ಔದ್ಯಮೀಕರಣದ ಫಲವು ಆರ್ಥಿಕ ಸ್ವಾತಂತ್ರ್ಯವಲ್ಲ. ನನ್ನ ದೃಷ್ಟಿಯಲ್ಲಿ, ಭಾರತೀಯರ ಆರ್ಥಿಕ ಸ್ವಾತಂತ್ರ್ಯವೆಂದರೆ, ಪ್ರತಿಯೊಬ್ಬ ಭಾರತೀಯ ಸ್ತ್ರೀ-ಪುರುಷನೂ ತನ್ನ ಸ್ವಂತ ಪ್ರಯತ್ನಗಳಿಂದ ಆರ್ಥಿಕವಾಗಿ ಉತ್ತಮ ಸ್ಥಿತಿಗೆ ಬರುವುದು. ಈ ಪದ್ಧತಿಯ ಪ್ರಕಾರ ಎಲ್ಲ ಸ್ತ್ರೀ-ಪುರುಷರಿಗೂ ಸಾಕಷ್ಟು ಹೊಟ್ಟೆ ಬಟ್ಟೆಗೆ ಸಿಕ್ಕುವಂತಾಗುವುದು. ಲಕ್ಷಾಂತರ ಜನರಿಗೆ ಈಗ ದೊರೆಯದಿರುವ ಹಾಲು-ಬೆಣ್ಣೆಗಳೂ ಸಿಗುವಂತಾಗುವವು.

(ಹ. ೧೯೩೭)

# ಪೂರ್ಣ ಸ್ವಾತಂತ್ರ್ಯದ ಮಾರ್ಗ

ವಿಧಾಯಕ ಕಾರ್ಯಕ್ರಮವೇ ಸತ್ಯ ಮತ್ತು ಅಹಿಂಸಾ ಮಾರ್ಗದಿಂದ ಪೂರ್ಣ ಸ್ವರಾಜ್ಯವನ್ನು ಗಳಿಸುವ ದಾರಿಯಾಗಿದೆ. ಅದರ ಪರಿಪೂರ್ಣ ಪ್ರಾಪ್ತಿಯೇ "ಪೂರ್ಣ ಸ್ವಾತಂತ್ರ್ಯ". ತಳ-ಪಾಯದಿಂದ ಹಿಡಿದು, ಜನಾಂಗವನ್ನು ಗಟ್ಟಿಮುಟ್ಟಾಗಿ ಕಟ್ಟು-ವುದಕ್ಕಾಗಿಯೇ ಸಿದ್ಧಗೊಳಿಸಿರುವ ವಿಧಾಯಕ ಕಾರ್ಯಕ್ರಮದಲ್ಲಿ ಜನಾಂಗದ ನಾಲ್ವತ್ತು ಕೋಟಿ ಜನರೂ ತೊಡಗಿದರೆ ಎಷ್ಟು ಒಳ್ಳೆಯದಾದೀತು! ಅದರ ಮೂಲಕವಾಗಿಯೇ ಎಲ್ಲ ರೀತಿಯ ಪೂರ್ಣ ಸ್ವಾತಂತ್ರ್ಯವೂ, ಪರದಾಸ್ಯವಿಮೋಚನೆಯೂ ದೊರೆ-ಯುತ್ತದೆ—ಎಂಬ ಸತ್ಯವನ್ನು ಯಾರಾದರೂ ಅಲ್ಲಗಳೆಯಲು ಸಾಧ್ಯವೆ? ಈ ರಚನಾತ್ಮಕ ಕಾರ್ಯಕ್ರಮದಲ್ಲಿ ಸಮಸ್ತ ಜನತೆಯೂ ಸಹಕರಿಸಲಾರದೆಂಬ ಭಾವನೆಯೇ ಟೀಕಾಕಾರರು ಮಾಡುವ ಕುಚೇಷ್ಟೆಗೆ ಕಾರಣವಾಗಿದೆ. ಅವರ ಈ ಕುಚೇಷ್ಟೆಯಲ್ಲಿ ನಾಕಷ್ಟು ಸತ್ಯವಿಲ್ಲದೇ ಇಲ್ಲ. ಅವರಿಗೆ ನನ್ನ ಉತ್ತರವಿಷ್ಟೇ— ಈ ಕಾರ್ಯಕ್ರಮವು ಆಚರಣೆಗೆ ಯೋಗ್ಯವಾಗಿದ್ದು, ಇನ್ನಷ್ಟು ಪ್ರಯತ್ನಮಾಡಬೇಕು. ಶುದ್ಧಾಂತಃಕರಣದ ಕಾರ್ಯಕರ್ತರು ಅಚಲ ನಿರ್ಧಾರದಿಂದ ದುಡಿದರೆ ಈ ಕಾರ್ಯಕ್ರಮವು, ಇತರ ಎಲ್ಲ ಕಾರ್ಯಕ್ರಮಗಳಿಗಿಂತ ಹೆಚ್ಚು ಸುಲಭವಾಗಿ, ಯಶಸ್ವಿ-

ಯಾಗುವುದು. ಏನೇ ಆಗಲಿ, ಅಹಿಂಸೆಯ ತಳಹದಿಯಮೇಲೆ ಇವರ ಬದಲು ಬೇರಾವ ಕಾರ್ಯಕ್ರಮವೂ ನನಗೆ ಕಾಣಿಸುತ್ತಿಲ್ಲ.

× × ×

ಸತ್ಯ ಮತ್ತು ಅಹಿಂಸೆಯ ಮೂಲಕ ಪಡೆಯುವ ಪೂರ್ಣಸ್ವಾತಂತ್ರ್ಯದಲ್ಲಿ, ಜಾತಿ, ಮತ, ಬಣ್ಣಗಳ ಭೇದಕ್ಕೆಡೆಯಿಲ್ಲದೆ, ಜನಾಂಗದ ತೀರ ದರಿದ್ರರಾದವರಿಗೂ ಸ್ವಾತಂತ್ರ್ಯವು ಸಿಗುವುದು. ಈ ಸ್ವಾತಂತ್ರ್ಯವು ಯಾರೊಬ್ಬರದೇ ಸ್ವತ್ತಾಗುವದಿಲ್ಲ. ಆದ್ದರಿಂದ ಇದು ಪರಸ್ಪರಾವಲಂಬನ ಮತ್ತು ಸಹಕಾರಗಳಿಗೆ ಸಂಪೂರ್ಣ ಅವಿರೋಧವಾಗಿಯೂ ಇರುವುದು. ಯುಕ್ಲಿಡ್‌ನ ರೇಖಾಶಾಸ್ತ್ರದ ಮಾನಸಿಕ ರೇಖೆಗೂ ಕಾಗದದ ಮೇಲಿನ ರೇಖೆಗೂ ಹೇಗೆ ತುಸು ಅಂತರವು ಅನಿವಾರ್ಯವಾಗಿರುವದೋ ಹಾಗೆಯೇ ಆಚರಣೆಯಲ್ಲಿ ಪರಿಪೂರ್ಣತೆಯನ್ನು ಸಾಧಿಸುವುದು ಯಾವಾಗಲೂ ದುಸ್ತರವೇ ಸರಿ. ಹಾಗೆಯೇ, ಸಂಪೂರ್ಣ ಸಾತಂತ್ರ್ಯವೆಂಬುದೂ ಸತ್ಯ-ಅಹಿಂಸೆಯ ಆಚರಣೆಯು ಎಷ್ಟು ಪರಿಪೂರ್ಣವಾಗಿರುತ್ತದೋ ಅಷ್ಟೇ ಪರಿಪೂರ್ಣವಾಗಿರುತ್ತದೆ.

ವಾಚಕನು ನನ್ನ ಈ ವಿಧಾಯಕ ಕಾರ್ಯಕ್ರಮದ ಪೂರ್ಣಚಿತ್ರವನ್ನು ಮನಸ್ಸಿನಲ್ಲಿಯೇ ಕಲ್ಪಿಸಿಕೊಂಡು ನೋಡಲಿ. ಅದನ್ನು ಪರಿಪೂರ್ಣವಾಗಿ ಆಚರಿಸಲು ಸಾಧ್ಯವಾಗುವುದೇ ನಾವು ಆಶಿಸುವ ಪೂರ್ಣ ಸ್ವಾತಂತ್ರ್ಯವಾಗುವುದು.

ಆದರೆ, ಹಿಂಸಾ ಮಾರ್ಗದಿಂದ ಪರಿಪೂರ್ಣವೆನಿಸುವ ಸ್ವಾತಂತ್ರ್ಯವು ಶಕ್ಯವೇ ಇಲ್ಲ. ಯಾಕಂದರೆ, ಜನಾಂಗದ ಯಾವ ಪಕ್ಷವು ಹೆಚ್ಚು ಪರಿಣಾಮಕಾರಿಯಾಗಿ ಹಿಂಸಾಮಾರ್ಗವನ್ನವಲಂಬಿಸುವುದೋ ಅದು ಇತರ ಪಕ್ಷಗಳನ್ನೆಲ್ಲ ಮೆಟ್ಟಿ

ನಿಲ್ಲದೇ ಗತ್ಯಂತರವಿಲ್ಲವೆನಿಸುವುದು. ಅಂತಹ ಪೂರ್ಣ ಸ್ವಾತಂತ್ರ್ಯದಲ್ಲಿ ಆರ್ಥಿಕವಾಗಲಿ, ಇತರ ಯಾವುದೇ ಬಗೆಯು ದಾಗಲೀ, ಪೂರ್ಣ ಸಮಾನತೆಯ ಕಲ್ಪನೆಗೂ ಎಡೆಯಿಲ್ಲ !

ಅಹಿಂಸಾಮಾರ್ಗದಿಂದ ರಚನಾತ್ಮಕ ಕಾರ್ಯಕ್ರಮವನ್ನು ಅನುಸರಿಸಬೇಕೆಂಬುದನ್ನು ವಾಚಕರಿಗೆ ಮನವರಿಕೆಮಾಡಿಕೊಡು ವುದೇ ನನ್ನ ಉದ್ದೇಶ. ಆದ್ದರಿಂದ, ಪೂರ್ಣ ಸ್ವಾತಂತ್ರ್ಯದ ಸಾಧನೆಗೆ ಹಿಂಸಾಮಾರ್ಗವು ನಿಷ್ಪ್ರಯೋಜಕವೆಂಬ ನನ್ನ ವಾದ-ವನ್ನು ಸ್ವೀಕರಿಸುವ ಅಗತ್ಯವಿಲ್ಲ. ಹಿಂಸಾಮಾರ್ಗದಿಂದ ಪಡೆಯುವ ಪೂರ್ಣ ಸ್ವಾತಂತ್ರ್ಯದಲ್ಲಿ, ಜನಾಂಗದ ತೀರ ದರಿದ್ರರಿಗೂ ಪೂರ್ಣ ಸ್ವಾತಂತ್ರ್ಯ ಸಿಗುವುದೆಂದು ವಾಚಕರು ಭಾವಿಸಿದರೆ ನನ್ನದೇನೂ ಅಡ್ಡಿ ಇಲ್ಲ; ಆದರೆ, ನನ್ನ ರಚನಾತ್ಮಕ ಕಾರ್ಯಕ್ರಮವನ್ನು ಇಡೀ ಜನಾಂಗವು ಆಚರಣೆಗೆ ತರುವುದ-ರಿಂದಲೂ ಅದು ಸಾಧ್ಯವೆಂದು ಅವರು ತಿಳಿದರೆ ನಾಕು.

(ರಚನಾತ್ಮಕ ಕಾರ್ಯಕ್ರಮ—ಪು. ೫–೭)

---

# ಸ್ವಾತಂತ್ರ್ಯದ ಸಾಮುದ್ರಿಕ ವರ್ತುಲ

ಸ್ವಾತಂತ್ರ್ಯವು ತಳದಿಂದ ಸುರುವಾಗಬೇಕು. ಪ್ರತಿಯೊಂದು ಗ್ರಾಮವೂ ಒಂದು ಪ್ರಜಾರಾಜ್ಯ ಇಲ್ಲವೆ ಪಂಚಾಯತ ರಾಜ್ಯವಾಗಬೇಕು. ಎಲ್ಲ ಅಧಿಕಾರಿಗಳೂ ಅದರ ಕೈಯಲ್ಲಿರಬೇಕು. ಅಂದರೆ, ಪ್ರತಿಯೊಂದು ಗ್ರಾಮವೂ ತನ್ನ ಯೋಗಕ್ಷೇಮವನ್ನು ತಾನೇ ನೋಡಿಕೊಳ್ಳುವಷ್ಟು ಸ್ವಾವಲಂಬಿಯಾಗಬೇಕು. ಸಂದರ್ಭ ಬಂದರೆ, ತನ್ನ ಸ್ವಾತಂತ್ರ್ಯ ರಕ್ಷಣೆಗಾಗಿ ಇಡೀ ಜಗತ್ತನ್ನೇ ಇದಿರಿಸುವಷ್ಟು ಸ್ವಸಾಮರ್ಥ್ಯ ಉಳ್ಳದ್ದಾಗಬೇಕು. ಆತ್ಮರಕ್ಷಣೆಗಾಗಿ ಅದು ತಕ್ಕ ತರಬೇತಿಹೊಂದಿದ್ದು, ಹೊರಗಿನ ದಾಳಿಯನ್ನಿದಿರಿಸುವುದರ ಸಲುವಾಗಿ ಆತ್ಮಾರ್ಪಣಮಾಡಲಿಕ್ಕೂ ಸಿದ್ಧವಾಗಿರಬೇಕು. ಈ ರೀತಿಯಲ್ಲಿ ಗ್ರಾಮವೇ ಮೂಲ ಘಟಕವಾಗಿರತಕ್ಕದ್ದು. ಹೀಗೆಂದಮಾತ್ರಕ್ಕೆ, ನೆರೆಹೊರೆಯ ಹಾಗೂ ಹೊರಜಗತ್ತಿನ ಸಂಪರ್ಕ ಅಥವಾ ಸಹಾಯವನ್ನು ನಿರಾಕರಿಸಬೇಕೆಂದು ಅರ್ಥವಲ್ಲ. ಅಂತಹ ಸಂಪರ್ಕ-ಸಹಾಯಗಳು ಪರಸ್ಪರ ಸ್ವಯಂಚಾಲಿತವಾಗಿರಬೇಕು. ಇಂಥ ಸಮಾಜವು ಉತ್ತಮ ಸಂಸ್ಕೃತಿಯುಳ್ಳದ್ದಾಗಿದ್ದು, ಇದರಲ್ಲಿಯ ಪ್ರತಿಯೊಬ್ಬ ಸ್ತ್ರೀಪುರುಷನೂ ತನ್ನ ತನ್ನ ಆವಶ್ಯಕತೆಗಳನ್ನು ತಿಳಿದುಕೊಂಡು, ಶ್ರಮಕ್ಕೆ ತಕ್ಕ ಪ್ರತಿಫಲವು ಎಲ್ಲರಿಗೂ ಸಿಗುವಂತೆ ನೋಡಿಕೊಳ್ಳುವನು.

ಇಂಥ ಸಮಾಜವು, ಸ್ವಾಭಾವಿಕವಾಗಿಯೇ, ಸತ್ಯ ಮತ್ತು ಅಹಿಂಸೆಯ ತಳಹದಿಯಮೇಲೆ ರಚಿತವಾಗಿರಬೇಕಾಗುವುದು. ನನ್ನ ಅಭಿಪ್ರಾಯವನ್ನು ಹೇಳುವುದಾದರೆ, ಸರ್ವಜ್ಞನೂ, ಸರ್ವಶಕ್ತನೂ, ಸ್ವಯಂಭುವೂ ಆದ ದೇವರಲ್ಲಿ ದೃಢ ಶ್ರದ್ಧೆ ಇಲ್ಲದೆ ಸತ್ಯ ಮತ್ತು ಅಹಿಂಸೆಯನ್ನು ಆಚರಿಸುವುದು ಅಶಕ್ಯ. ಆ ದೈವೀಶಕ್ತಿಯು ನಮಗೆ ತಿಳಿದಿರುವ ಎಲ್ಲ ಲೌಕಿಕ ಶಕ್ತಿಗಳನ್ನೂ ಆವರಿಸಿಕೊಂಡಿದ್ದು ಅವೆಲ್ಲವುಗಳಿಂದಲೂ ಸ್ವತಂತ್ರವಾಗಿದ್ದು, ಅವುಗಳು ಅಳಿದಮೇಲೂ ಉಳಿಯುವುದು. ಸರ್ವವ್ಯಾಪಿಯಾದ ಈ ಅಮರಜ್ಯೋತಿಯಲ್ಲಿ ನಂಬಿಕೆ ಇಲ್ಲದೆ ನಾನು ಬದುಕಲಾರೆನು.

ಅಸಂಖ್ಯಾತವಾದ ಗ್ರಾಮಗಳನ್ನೊಳಗೊಂಡ ಈ ಸ್ವಾತಂತ್ರ್ಯ ಮಂದಿರದಲ್ಲಿ ಪ್ರತಿಯೊಂದು ಗ್ರಾಮವೂ ಬೆಳೆಯುತ್ತ ಹೋಗುವ ಒಂದು ಪುಟ್ಟ ವರ್ತುಳದಂತಿರುವುದು. ಜನಜೀವನವು ಗೋಪುರಾಕೃತಿಯಲ್ಲಿ ಏರುತ್ತ, ಅದರ ಭಾರವನ್ನೆಲ್ಲ ತಳಗಟ್ಟು ಹೊತ್ತುಕೊಳ್ಳುವಂತಾಗಬಾರದು. ರಾಷ್ಟ್ರಜೀವನದಲ್ಲಿ ವ್ಯಕ್ತಿಯ ಜೀವನವೇ ಕೇಂದ್ರವಾಗಿದ್ದು,ಕುಟುಂಬ, ಗ್ರಾಮವೆಂಬ ವರ್ತುಲಗಳಾಗಿ ವಿಸ್ತರಿಸುತ್ತ ಸಮುದ್ರದಷ್ಟು ವಿಶಾಲವಾಗುತ್ತ ಹೋಗಬೇಕು. ಸಾಮೂಹಿಕ ಸುಖಕ್ಕಾಗಿ ವ್ಯಕ್ತಿಯು ಆತ್ಮಾರ್ಪಣ ಮಾಡಲಿಕ್ಕೂ ಸಿದ್ಧವಾಗಬೇಕು. ಹೀಗೆ, ವ್ಯಕ್ತಿಜೀವನಗಳು ವಿಕಾಸಗೊಂಡು, ವ್ಯಕ್ತಿಗಳು ತಾವು ಬೇರೆ, ಸಮಾಜ ಬೇರೆ ಎಂದು ತಿಳಿಯದೆ, ಸಾಮರಸ್ಯದಿಂದ ಬಾಳುವಂತಾಗಬೇಕು. ಯಾವ ವ್ಯಕ್ತಿಯೂ ದಂಭ ಇಲ್ಲವೆ ಅಹಂಕಾರದಿಂದ ಅನ್ಯ ವ್ಯಕ್ತಿಗಳಮೇಲೆ ಒಡೆತನಮಾಡದೆ, ವಿನೀತವಾಗಿದ್ದುಕೊಂಡು, ಎಲ್ಲರೂ, ಸಮುದ್ರದಷ್ಟು ವಿಶಾಲವಾದ ವರ್ತುಲದ ಭಾಗವೆಂದೂ

ಅದರ ಮಧ್ಯಬಿಂದುವಿನಷ್ಟು ಘನತೆ ಮತ್ತು ಗಾಂಭೀರ್ಯವನ್ನು ಪಡೆಪವರೆಂದೂ ಭಾವಿಸಿ ಬದುಕಬೇಕು.

ಆದ್ದರಿಂದ, ಎಲ್ಲಕ್ಕೂ ದೊಡ್ಡದಾಗಿರುವ ಕಟ್ಟಕಡೆಯ ವರ್ತುಲವು ತನ್ನೊಳಗಿನ ವರ್ತುಲಗಳನ್ನು ಹಾಳುಮಾಡು-ವಂತಹ ಇಲ್ಲವೆ, ಕುಗ್ಗಿಸುವಂತಹ ಅಧಿಕಾರವನ್ನುಳ್ಳದಾಗಿರದೆ, ಅವುಗಳಿಗೆ ಶಕ್ತಿಯನ್ನು ನೀಡುತ್ತ, ಅವುಗಳ ಏಳಿಗೆಯಿಂದಲೇ ತಾನೂ ಏಳಿಗೆಹೊಂದುತ್ತ ಭದ್ರವಾಗಿ ಬಾಳುವುದು. "ಇದೊಂದು ಆದರ್ಶದ ಕನಸು. ಇದರ ಬಗೆಗೆ ಯೋಚಿಸುವುದು ನಿಷ್ಪ್ರಯೋ-ಜಕ" ಎಂದು ನನ್ನನ್ನು ಮೂದಲಿಸಬಹುದು. ಯೂಕ್ಲಿಡ್ ತತ್ತ್ವದ ಮಾನಸಿಕ ಬಿಂದುವನ್ನು ಎಂತಹ ನಿಪುಣನೂ ಕಾಗದದಮೇಲೆ ಗುರುತಿಸಲಾರನಾದರೂ, ಅದರ ಸತ್ಯತ್ವನು ಹೇಗೆ ಅವಿನಾಶಿಯಾಗಿರಬಲ್ಲುದೋ ಹಾಗೆ, ಮಾನವಲೋಕದ ಬಾಳಿಗೆ ನನ್ನ ಈ ಚಿತ್ರದ ಮೌಲ್ಯವೂ ಅವಿನಾಶಿಯಾಗಿರ-ಬಲ್ಲುದು. ಈ ಚಿತ್ರವನ್ನು ಸಂಪೂರ್ಣ ನಿರ್ದೋಷವಾಗಿ ರಚಿಸಿ-ಕೊಳ್ಳಲಿಕ್ಕೆ ಶಕ್ಯವಾಗದಿದ್ದರೂ, ಭಾರತವು ಅದರ ಸಾಧನೆ-ಗಾಗಿಯಾದರೂ ಪ್ರಯತ್ನಿಸಲಿ. ನಮಗೇನು ಬೇಕೋ ಅದರ ಸ್ಪಷ್ಟವಾದ ಕಲ್ಪನೆಯನ್ನು ನಾವು ಮೊಟ್ಟಮೊದಲು ಮಾಡಿ-ಕೊಳ್ಳದಿದ್ದರೆ, ಅದರ ಕಡೆಗೆ ಸಾಗುವುದಾದರೂ ಹೇಗೆ? ಭಾರತದ ಪ್ರತಿಯೊಂದು ಹಳ್ಳಿಯೂ ಎಂದಾದರೊಂದು ದಿನ ಒಂದೊಂದು ಪ್ರಜಾರಾಜ್ಯವಾಗಿ ಬದುಕುವ ಕಾಲ ಬಂದರೆ, ತೀರ ಸಣ್ಣ ವರ್ತುಲದ ಮಧ್ಯಬಿಂದುವೂ ಸಮಾನಶಕ್ತಿಯುಳ್ಳ-ದ್ದಾಗಿ ಬಾಳಲೇಬೇಕಾಗುವುದೆಂಬ ನನ್ನ ಮಾತು ಯಥಾರ್ಥ-ವಾಗುವುದೆಂದು ನಾನು ತಿಳಿದಿದ್ದೇನೆ.

ಈ ಚಿತ್ರದಲ್ಲಿ ಪ್ರತಿಯೊಂದು ಮತಧರ್ಮಕ್ಕೂ ಪೂರ್ಣ

ಸ್ವಾತಂತ್ರ್ಯವೂ ಸಮಾನಾವಕಾಶವೂ ಇರುವುದು. ನಾವೆಲ್ಲರೂ ಒಂದು ಮಹಾವೃಕ್ಷದ ಎಲೆಗಳು; ಅದರ ಕಾಂಡವನ್ನು ಅಲು-ಗಾಡಿಸಿ, ಬೇರಿನಿಂದ ಅವನ್ನು ಬೇರ್ಪಡಿಸಲು ಶಕ್ಯವಿಲ್ಲ. ಏಕೆಂದರೆ ಆ ಬೇರು ಭೂಗರ್ಭದ ವರೆಗೂ ಇಳಿದು ಭದ್ರವಾಗಿಬಿಟ್ಟಿದೆ. ಎಂತಹ ಭೀಕರ ಬಿರುಗಾಳಿಯೂ ಅದನ್ನು ಕದಲಿಸಲಾರದು.

ಈ ನನ್ನ ಕಲ್ಪನೆಯ ಸಾತಂತ್ರ್ಯದಲ್ಲಿ ಮನುಷ್ಯ ಶ್ರಮ-ವನ್ನು ಆಕ್ರಮಿಸುವ ಹಾಗೂ ಕೆಲವೇ ಜನರ ಕೈಯಲ್ಲಿ ಅಧಿಕಾರವನ್ನು ಕೇಂದ್ರೀಕರಿಸಿಕೊಡುವ ಯಂತ್ರಗಳಿಗೆ ಸ್ಥಾನ-ವಿಲ್ಲ. ಸುಸಂಸ್ಕೃತ ಮಾನವ ಸಮಾಜದಲ್ಲಿ ಶ್ರಮಕ್ಕೂ ಒಂದು ವಿಶಿಷ್ಟ ಸ್ಥಾನವಿರುತ್ತದೆ. ಪ್ರತಿ ವ್ಯಕ್ತಿಗೂ ಉಪಯೋಗಕ್ಕೆ ಬೀಳುವ ಯಂತ್ರಕ್ಕೆ ಮಾತ್ರ ಸ್ಥಾನವಿದೆ. ಆದರೆ ಪ್ರತಿವ್ಯಕ್ತಿಗೂ ಉಪಯೋಗವಾಗುವ ಈ ಯಂತ್ರ ಯಾವುದೆಂಬ ಬಗೆಗೆ ನಾನಿನ್ನೂ ವಿಚಾರಮಾಡಿರುವುದಿಲ್ಲ. ಅಂತಹ ಒಂದು ಯಂತ್ರವು "ಸಿಂಗರ್ ಹೊಲಿಗೆ ಯಂತ್ರ"ವಾಗಿದೆ. ಅದೂ ಕೂಡ ತೀರ ಆವಶ್ಯವಾದದ್ದಲ್ಲ. ನನ್ನ ಚಿತ್ರವನ್ನು ಪೂರ್ಣಗೊಳಿಸಲು ಅದರ ಅವಶ್ಯಕತೆ ನನಗಿಲ್ಲ.

(ಹ. ೧೯೪೬)

# ಅಹಿಂಸಾತ್ಮಕ ಸ್ವಾತಂತ್ರ್ಯ

ಅಹಿಂಸೆಯ ತಳಹದಿಯಮೇಲೆ ರಚಿತವಾದ ಸ್ವಾತಂತ್ರ್ಯ-ದಲ್ಲಿ, ಜನರಿಗೆ ತಮ್ಮ ಹಕ್ಕುಗಳೇನೆಂಬುದು ತಿಳಿಯದಿದ್ದರೂ ಅಡ್ಡಿ ಇಲ್ಲ; ಆದರೆ ತಮ್ಮ ಕರ್ತವ್ಯಗಳೇನೆಂಬುದನ್ನವರು ತಿಳಿದು-ಕೊಳ್ಳುವುದು ಅತ್ಯಗತ್ಯ. ಕರ್ತವ್ಯವು ತನ್ನ ಕೂಡವೇ ಹಕ್ಕನ್ನೂ ನಿರ್ಮಿಸಿಕೊಂಡು ಬರುತ್ತದೆ. ಸ್ವಕರ್ತವ್ಯವನ್ನು ಮಾಡುವುದ-ರಿಂದ ಬರುವ ಹಕ್ಕೇ ನಿಜವಾದ ಹಕ್ಕು. ಆದ್ದರಿಂದ, ಯಾವನು ತಾನು ವಾಸಿಸಿರುವ ದೇಶಕ್ಕೆ ಸೇವೆ ಸಲ್ಲಿಸುತ್ತಾನೋ ಅವನಿಗೆ ಮಾತ್ರವೇ ಆ ದೇಶದ ನಾಗರಿಕನಿಗಿರುವ ಹಕ್ಕುಗಳು ಪ್ರಾಪ್ತ-ವಾಗುತ್ತವೆ. ಅಲ್ಲದೆ, ಅಂಥವರುಮಾತ್ರವೇ ತಮ್ಮ ಹಕ್ಕುಗಳನ್ನು ಸರಿಯಾಗಿ ನಿರ್ವಹಿಸಬಲ್ಲವರಾಗುತ್ತಾರೆ. ಪ್ರತಿಯೊಬ್ಬನಿಗೂ ಸುಳ್ಳು ಹೇಳುವ ಇಲ್ಲವೇ ಪುಂಡತನಮಾಡುವ ಹಕ್ಕು ಇದ್ದೇ ಇದೆ. ಆದರೆ, ಆ ಹಕ್ಕನ್ನು ಚಲಾಯಿಸುವುದರಿಂದ ಚಲಾ-ಯಿಸುವವನಿಗೂ ಸಮಾಜಕ್ಕೂ ಹಾನಿಯಾಗುವುದು. ಸತ್ಯ ಮತ್ತು ಅಹಿಂಸೆಯಿಂದ ನಡೆಯುವವನಿಗೆ ಗೌರವ ಬರುತ್ತದೆ, ಅದರೊಂದಿಗೆ ಹಕ್ಕುಗಳೂ ಬರುತ್ತವೆ. ಕರ್ತವ್ಯಮಾಡಿ ಹಕ್ಕನ್ನು ಗಳಿಸಿಕೊಳ್ಳುವವರು ಅದನ್ನು ಸ್ವಂತಕ್ಕಾಗಿ ಉಪಯೋಗಿಸಿಕೊಳ್ಳದೆ ಸಮಾಜದ ಸೇವೆಗಾಗಿ ಉಪಯೋಗಿಸುವರು. ಜನತೆಯು

ಸ್ವಾತಂತ್ರ್ಯವೆಂದರೆ ವ್ಯಕ್ತಿಗಳ ಸ್ವಾತಂತ್ರ್ಯದ ಸಮೂಹ. ಅಂತಹ ಸ್ವಾತಂತ್ರ್ಯವು ವ್ಯಕ್ತಿಗಳು ತಮ್ಮ ತಮ್ಮ ನಾಗರಿಕ ಕರ್ತವ್ಯಗಳನ್ನು ಮಾಡುವುದರಿಂದಲೇ ಬರುತ್ತದೆ. ಅದರಲ್ಲಿ ಯಾರೊಬ್ಬನೂ ತನ್ನ ಹಕ್ಕುಗಳ ಬಗೆಗೆ ಚಿಂತಿಸುವುದಿಲ್ಲ. ಜನರು ತಮ್ಮ ಕರ್ತವ್ಯಗಳನ್ನು ಮತ್ತಷ್ಟು ಚೆನ್ನಾಗಿಮಾಡ-ಬಯಸಿದಾಗ ಅವುಗಳು ತಾವಾಗಿಯೇ ಬರುತ್ತವೆ.

ಹಳ್ಳಿಗಳಿಗೆ ಹೋಗುವ ಗಂಡಸರಾಗಲೀ ಹೆಂಗಸರಾಗಲೀ, ಹಳ್ಳಿಗರು ತಮ್ಮ ಹಳ್ಳಿಗಳನ್ನು ಸ್ವಚ್ಛವಾಗಿಡಬೇಕೆಂದೂ, ಸ್ವಾವ-ಲಂಬಿಗಳಾಗಬೇಕೆಂದೂ, ಅದು ಅವರ ಕರ್ತವ್ಯವೆಂದೂ ಹೇಳು-ತ್ತಾರೆ. ಸ್ವತಂತ್ರ ಸರಕಾರವೇ ಈ ಕೆಲಸವನ್ನು ಮಾಡಿಕೊಡುವು-ದೆಂದು ಅವರು ನಿರೀಕ್ಷಿಸಬಾರದು. ನಮ್ಮ ಹಳ್ಳಿಗಳು ಗ್ರಾಮೋ-ದ್ಯೋಗಗಳ ಕಣ್ಮರೆಯಿಂದಾಗಿ ವಿನಾಶದ ಅಂಚಿನಲ್ಲಿವೆ. ಗ್ರಾಮೋದ್ಯೋಗಗಳ ಪುನರುಜ್ಜೀವನದಿಂದಲೇ ಅವುಗಳನ್ನು ಪುನಃ ಚೈತನ್ಯಭರಿತವಾಗಿ ಮಾಡಬೇಕಾಗಿದೆ. ಇವುಗಳಲ್ಲಿ ಚರಖಕ್ಕೇ ಕೇಂದ್ರಸ್ಥಾನ ಬರುವುದು. ಉಳಿದ ಉದ್ಯೋಗಗಳು ಅದನ್ನು ಒಳಸಿಕೊಂಡಿರಬೇಕು. ಇದರಿಂದ ಎಲ್ಲ ಜನರೂ ಉದ್ಯೋಗದ ಬೆಲೆಯನ್ನರಿಯುವರು; ಅಲ್ಲದೆ ಎಲ್ಲರೂ ರಾಷ್ಟ್ರ ಹಿತಕರವಾದ ಉದ್ಯೋಗಗಳಲ್ಲಿ ತೊಡಗಿದರೆ, ಜನತೆಯು ಜನತೆಗಾಗಿಯೇ ಲಕ್ಷಾಂತರ ರೂಪಾಯಿ ಉಳಿಸಿಕೊಂಡಂತಾಗು-ವುದು. ಹೀಗೆ ಪ್ರತಿಯೊಂದು ವ್ಯಕ್ತಿಯೂ ಸ್ವಯಂಸೇವಕನಾಗಿ ಸ್ವಾವಲಂಬಿಯಾಗುವ ತತ್ತ್ವವನ್ನು ಆಚರಿಸಿ ತೋರಿಸಿದಂತಾ-ಗುವುದಲ್ಲದೆ, ಅವನು ತೀರ ಅಲ್ಪ ಕರವನ್ನು ತೆತ್ತು ಬೇರೆ ಯಾವ ಆಡಳಿತ ಪದ್ಧತಿಯಿಂದಲೂ ಸಿಗುವುದಕ್ಕಿಂತ ಹೆಚ್ಚಿನ ಸುಖವನ್ನು ಪಡೆಯಬಹುದು. ಯಾರು ರಾಷ್ಟ್ರಕ್ಕಾಗಿ ಶ್ರಮಮಾಡುತ್ತಾರೋ

ಅವರು ನಾಣ್ಯದ ಬದಲು ಶ್ರಮರೂಪದಲ್ಲಿಯೇ ಕರ ತೆತ್ತಂತಾಗುವುದು. ನಾಣ್ಯಗಳಾದರೋ ಶ್ರಮದ ಒಂದು ಅಳತೆಯ ಚಿಹ್ನೆ. ಅದಕ್ಕೆ ಮತ್ತಾವ ಬೆಲೆಯೂ ಇರುವುದಿಲ್ಲ. ನಾನು ಒಂದು ರೂಪಾಯಿ ಕಿಮ್ಮತ್ತಿನ ಹಿಟ್ಟನ್ನು ಕೊಂಡರೆ, ಅದಕ್ಕೆ ಕೃಷಿಶ್ರಮದ ಕೂಲಿ, ಸಾಗುಕೂಲಿ ಹಾಗೂ ಬೀಸಿದ ಕೂಲಿ ಕೊಟ್ಟಂತಾಗುವುದು. ಆದ್ದರಿಂದ, ಯಾವನು ಸಂಪದುತ್ಪಾದನೆಯನ್ನರಿತು ಕೆಲಸಮಾಡುವನೋ ಅವನು ಸಂಪತ್ತಿನ ನಿಜವಾದ ಒಡೆಯನಾಗುವನು. ರಾಷ್ಟ್ರದ ಸರಕಾರಕ್ಕೆ ನಾನು ಶ್ರಮರೂಪವಾಗಿ ಕರತೆರುವುದೂ, ಹಣರೂಪವಾಗಿತೆರುವುದೂ ಒಂದೇ. ಎಷ್ಟೋ ವೇಳೆ ಸರಕಾರಕ್ಕೆ ಶ್ರಮರೂಪದಿಂದ ಬರುವ ಕರವು ಹಣರೂಪದಿಂದ ಬರುವುದಕ್ಕಿಂತ ಹೆಚ್ಚು ಬೆಲೆಯುಳ್ಳದ್ದಾಗುವುದು. ಶ್ರಮರೂಪದಿಂದ ಕರ ತೆರುವುದು ಜನತೆಯನ್ನು ಗಟ್ಟಿಮುಟ್ಟಾಗಿಸುತ್ತದೆ. ಸಮಾಜದ ಸಲುವಾಗಿ ಯಾರು ತಾವಾಗಿಯೇ ಶ್ರಮಿಸುತ್ತಾರೋ ಅವರಿಗೆ ಶ್ರಮದ ಬದಲಾಗಿ ಹಣ ಬೇಕೆನಿಸುವುದಿಲ್ಲ. ಕರವನ್ನು ಕೂಡಿಸುವ ಮತ್ತು ಲೆಕ್ಕವನ್ನಿಡುವ ಕೆಲಸವು ಕಡಮೆಯಾಗುವುದಲ್ಲದೆ, ಪ್ರತಿಫಲವೂ ಹಣದಷ್ಟೇ ಉಪಯುಕ್ತವೆನಿಸುವುದು

ಜವಾಬ್ದಾರಿ ಸರಕಾರದಲ್ಲಿ ಅರಸನಿಂದ ಆಳಿನವರೆಗಿನ ಎಲ್ಲ ನಾಗರಿಕರೂ ಏಳಿಗೆ ಹೊಂದುವರು. ಅಹಿಂಸೆಯ ತಳಹದಿಯುಳ್ಳ ಸ್ವಾತಂತ್ರ್ಯದಲ್ಲಿ, ಯಾರು ಯಾರೊಬ್ಬನ ಶತ್ರುವೂ ಅಲ್ಲ; ಪ್ರತಿಯೊಬ್ಬನೂ ಸಾರ್ವತ್ರಿಕ ಹಿತಕ್ಕಾಗಿ ತನ್ನ ತನ್ನ ಭಾಗವನ್ನು ಸಲ್ಲಿಸುತ್ತಾನೆ. ಎಲ್ಲರೂ ಓದು ಬರೆಹ ಬಲ್ಲವರಾಗಿ, ತಮ್ಮ ತಮ್ಮ ಜ್ಞಾನಾಭಿವೃದ್ಧಿ ಮಾಡಿಕೊಳ್ಳುತ್ತಾರೆ. ರೋಗ ರುಜಿನಗಳು ಬಹಳ ಕಡಮೆಯಾಗುತ್ತವೆ; ಯಾರೊಬ್ಬನೂ

ನಿರ್ಧನಿಕ ಇಲ್ಲವೆ ನಿರ್ಗತಿಕನಾಗಿರುವುದಿಲ್ಲ. ಹಾಗೂ ಕೆಲಸ-ಮಾಡಬಯಸುವವನಿಗೆ ತಕ್ಕ ಕೆಲಸವು ಸಿಕ್ಕೇ ಸಿಗುತ್ತದೆ. ಸ್ವತಂತ್ರ ಸರಕಾರದ ಕೆಳಗೆ ಜೂಜು, ಕುಡಿತ, ವ್ಯಭಿಚಾರ ಅಥವಾ ವರ್ಗದ್ವೇಷಗಳಿಗೆ ಆಸ್ಪದವಿರುವುದಿಲ್ಲ. ಶ್ರೀಮಂತರು ತಮ್ಮ ಸಂಪತ್ತನ್ನು ಐಷಾರಾಮುಗಳಿಗಾಗಿ ಪೋಲು ಮಾಡದೆ ಬುದ್ಧಿವಂತಿಕೆಯಿಂದಲೂ, ಉಪಯುಕ್ತ ಕಾರ್ಯಕ್ಕಾಗಿಯೂ ಉಪಯೋಗಿಸುವರು. ಕೆಲವೇ ಜನರು ಸುಖಸಮೃದ್ಧಿಯಿಂದ ಅರಮನೆಯಂತಹ ಮಹಾಸೌಧಗಳಲ್ಲಿ ವಾಸಿಸುತ್ತ, ಕೋಟ್ಯಂತರ ಜನರು ಗಾಳಿಬೆಳಕಿಗೂ ಗತಿ ಇಲ್ಲದ ಗುಡಿಸಲುಗಳಲ್ಲಿ ವಾಸಿಸು-ವಂತಾಗಲೇಬಾರದು.

ಹಾಗೆಯೇ ಹಿಂದೂ-ಮುಸ್ಲಿಂ ಭೇದ ಭಾವವೂ, ಅಸ್ಪೃ-ಶ್ಯತೆಯೂ, ಮೇಲು-ಕೀಳು ಭಾವನೆಯೂ ಇರಲೇ ಕೂಡದು. ಅಹಿಂಸಾತ್ಮಕವಾದ ಸ್ವತಂತ್ರ ರಾಜ್ಯದಲ್ಲಿ ಜನತೆಯ ನ್ಯಾಯ-ವಾದ ಹಕ್ಕುಗಳ ಮೇಲೆ ಎಂದೂ ದಾಳಿಯಾಗಲಾರದು. ಅದರ ಬದಲು, ಯಾರೊಬ್ಬರೂ ಅನ್ಯಾಯವಾದ ಹಕ್ಕುಗಾರಿಕೆ ಉಳ್ಳವ-ರಾಗಲಾರರು. ಸುಸಂಘಟಿತವಾದ ರಾಜ್ಯದಲ್ಲಿ ಒಬ್ಬರು ಮತ್ತೊಬ್ಬರಿಂದ ಕಸಿದುಕೊಳ್ಳಲು ಶಕ್ಯವಾಗದು. ಹಾಗೂ ಕಸಿದವರನ್ನು ದಂಡಿಸಲು ಬಲಪ್ರಯೋಗಮಾಡುವ ಅಗತ್ಯವೂ ಇರಲಾಗದು.

(ಹ. ೧೯೩೯)

---

# ಸ್ವರಾಜ್ಯದಲ್ಲಿ ಅರಸೊತ್ತಿಗೆಯ ಕರ್ತವ್ಯ

ನನ್ನ ಕಲ್ಪನೆಯ ಸ್ವರಾಜ್ಯದಲ್ಲಿ ಅರಸೊತ್ತಿಗೆಯು ಅಂತ್ಯವಿಲ್ಲ. ಸ್ವರಾಜ್ಯವು ಸಕಲ ಅನಿಷ್ಟಗಳಿಗೂ ಒಂದು ದಿವ್ಯ ಔಷಧವೆಂಬ ದೃಢವಾದ ನಂಬಿಗೆಯಿಂದಲೇ ನಾನು ಸ್ವರಾಜ್ಯ ಚಳವಳಿಯಲ್ಲಿ ನನ್ನ ಸರ್ವಸ್ವವನ್ನು ತೊಡಗಿಸಿದ್ದೇನೆ. ಸೂರ್ಯೋದಯವಾಗುತ್ತಲೇ ಕತ್ತಲೆಯು ಮಾಯವಾಗುವಂತೆ, ಸ್ವರಾಜ್ಯೋದಯವಾಗುತ್ತಲೇ ಅರಸರ ಮತ್ತು ಪ್ರಜೆಗಳ ಅನಾಯಕತ್ವವೆಂಬ ಕತ್ತಲೆಯು ನಿಮಿಷಮಾತ್ರದಲ್ಲಿಯೇ ಮಾಯವಾಗುವುದು. ಅರಸೊತ್ತಿಗೆಗೆ ನೈತಿಕ ತಳಹದಿ ಏನಾದರೂ ಇರುವುದಾದರೆ, ಅರಸರು ತಾವು ಪಡೆಯುವ ಕರಕಂದಾಯಗಳ ಸ್ವತಂತ್ರ ಒಡೆಯರಲ್ಲ; ಅವರು ಅವುಗಳ ಧರ್ಮದರ್ಶಿಗಳು, ಆದ್ದರಿಂದ ಅದನ್ನವರು ಧರ್ಮನಿಧಿಯೆಂದೇ ಬಗೆದು ವೆಚ್ಚಮಾಡುವರು. ಇಂಗ್ಲೀಷರ ರಾಜ್ಯಘಟನೆಯು ಈ ತತ್ತ್ವದ ಪ್ರತ್ಯಕ್ಷ ಕಾರ್ಯಾಚರಣೆಯಾಗಿದೆ ಎನ್ನಬಹುದು. ಅಬುಬಕರ್ ಮತ್ತು ಹಜ್ರತ್ ಉಮರರು ಕೋಟಿಗಟ್ಟಳೆ ಹಣವನ್ನು ವಸೂಲು ಮಾಡುತ್ತಿದ್ದರೂ ಅವರು ಭಿಕಾರಿಗಳಂತೆಯೇ ಇರುತ್ತಿದರು. ಸಾರ್ವಜನಿಕರ ಈ ಹಣದಿಂದ ಒಂದು ಕಾಸನ್ನಾದರೂ ಅವರು ಸ್ವಂತಕ್ಕೆ ಉಪಯೋಗಿಸುತ್ತಿದ್ದಿಲ್ಲ. ಜನತೆಗೆ ಅನ್ಯಾಯವಾಗದಂತೆ ಅವರು

ಸದಾ ಎಚ್ಚತ್ತುಕೊಂಡೇ ಇರುತ್ತಿದ್ದರು. ಹಗೆಗಳಿಗೂ ಕೂಡಾ ಅನ್ಯಾಯವಾಗಕೂಡದು ಎಂಬುದೇ ಅವರ ತತ್ತ್ವವಾಗಿದ್ದಿತು.

ಆ ತತ್ತ್ವವನ್ನು ನಾನು ಒಪ್ಪುತ್ತೇನೆ ಹಾಗೂ ಅದರ ಅನುಷ್ಠಾನದಿಂದಲೇ ಜನಸೇವಕರ ಅರಸನಾಗುತ್ತೇನೆ. ಪ್ರಜೆಗಳೇ ನಿಜವಾದ ಒಡೆಯರು, ಯಜಮಾನರು. ಆದರೆ, ಜನತೆಯೆಂಬ ಆ ಯಜಮಾನನೇ ನಿದ್ರಿಮಾಡಿದರೆ, ಸೇವಕನೇನುಮಾಡಬೇಕು? ಆದ್ದರಿಂದ, ನಿಜವಾದ ರಾಷ್ಟ್ರೀಯ ಜಾಗ್ರತಿಯನ್ನುಂಟುಮಾಡುವ ಪ್ರಯತ್ನದಲ್ಲಿ ಎಲ್ಲವೂ ಸೇರಿರುತ್ತದೆ.

ಇದು ನನ್ನ ಆದರ್ಶವಾಗಿರುವುದರಿಂದ ನನ್ನ ಕಲ್ಪನೆಯ ಸ್ವಾತಂತ್ರ್ಯದಲ್ಲಿ ದೇಶೀ ಸಂಸ್ಥಾನಗಳಿಗೂ ಸ್ಥಾನವಿರುತ್ತದಲ್ಲದೆ, ಪ್ರಜೆಗಳ ಹಕ್ಕು ಬಾಧ್ಯತೆಗಳಿಗೆ ಪೂರ್ಣ ರಕ್ಷಣೆಯೂ ಇರುತ್ತದೆ ಕರ್ತವ್ಯ ಪಾಲನೆಯೇ ಹಕ್ಕು ಬಾಧ್ಯತೆಗಳ ಮೂಲ. ಆದ್ದರಿಂದಲೇ ನಾನು ಅರಸರ ಮತ್ತು ಪ್ರಜೆಗಳ ಕರ್ತವ್ಯಗಳೇ-ನೆಂಬುದನ್ನು ಹೇಳುತ್ತಿದ್ದೇನೆ. ಸಂಸ್ಥಾನಗಳಿಗೆ ಯಾವ ಬಗೆಯ ರಾಜ್ಯಘಟನೆ ಇರಬೇಕೆಂಬುದನ್ನು ನಾನು ಪ್ರಸ್ತಾಪಿಸುವುದಿಲ್ಲ ಅದನ್ನು ನೀವೇ ನಿರ್ಧರಿಸಿಕೊಳ್ಳಬೇಕು. ಜನಾಂಗವು ತನ್ನ ಧ್ಯೇಯವನ್ನು ಸಾಧಿಸಿಕೊಳ್ಳಲು ಶಕ್ತಿಸಂಪನ್ನವಾಗಬೇಕು. ಹಾಗೂ ಅದನ್ನು ಪಡೆಯುವ ದಾರಿಯಾವುದು ಎಂಬುದನ್ನು ಕಂಡುಹಿಡಿಯುವುದೇ ನನ್ನ ಕರ್ತವ್ಯವಾಗಿದೆ. ಜನಾಂಗಕ್ಕೆ ತನ್ನ ಶಕ್ತಿಯು ಅರಿವಾಗುತ್ತಲೇ ಅದು ತನ್ನ ಗುರಿಯನ್ನು ಮುಟ್ಟುವ ರೀತಿಯನ್ನು ತಾನೇ ಕಂಡುಕೊಳ್ಳುವುದು.

(ಯ. ಇ. ೧೯-೨೫)

## ಎಲ್ಲ ಅಧಿಕಾರಗಳೂ ರೈತರಿಗೆ ಸೇರಿರಬೇಕು

ಸೋವಿಯಟ್ ರಶಿಯಾದ ಪರಿಸ್ಥಿತಿ ನನಗೆ ಗೊತ್ತಿಲ್ಲ. ಆದರೆ, ನಮಗೆ ಪ್ರಜಾಪ್ರಭುತ್ವ ಪದ್ಧತಿಯ ಸ್ವರಾಜ್ಯ ದೊರೆಯುವುದಾದರೆ ನಾವದನ್ನು ಅಹಿಂಸೆಯಿಂದಲೇ ಪಡೆಯಬೇಕು, ಹಾಗೂ ಅದರಲ್ಲಿ ರಾಜಕೀಯ ಅಧಿಕಾರ ಸಹಿತವಾಗಿ ಎಲ್ಲ ಅಧಿಕಾರಗಳೂ ರೈತರ ಕೈಯಲ್ಲಿಯೇ ಇರಬೇಕು ಎಂಬುದೇ ನನ್ನ ಅಭಿಪ್ರಾಯ.

(ಪತ್ರಿಕಾ ವರದಿ ೧೯೪೪)

## ಎಲ್ಲ ವೃತ್ತಿಗಳಿಗೂ ಸಮಾನ ಪ್ರತಿಫಲ

ಭಾರತದ ಸ್ವಾತಂತ್ರ್ಯವು ಜಗತ್ತಿಗೆ ಒಂದು ಆದರ್ಶವೆನಿಸಬೇಕಾದರೆ, ಭಂಗಿಗಳೂ, ಡಾಕ್ಟರುಗಳೂ, ವಕೀಲರೂ, ಶಿಕ್ಷಕರೂ ವ್ಯಾಪಾರಿಗಳೂ, ಎಲ್ಲ ವೃತ್ತಿಗಳವರೂ, ತಮ್ಮ ತಮ್ಮ ದಿನದ ದುಡಿತಗಳಿಗೆ ಒಂದೇ ಮಟ್ಟದ ಪ್ರತಿಫಲವನ್ನು ಪಡೆಯುವಂತಾಗಬೇಕು. ಈ ಗುರಿಯನ್ನು ಭಾರತೀಯ ಸಮಾಜವು ಸಂಪೂರ್ಣ-

ವಾಗಿ ಸಾಧಿಸಲಾರದಾದರೂ, ಅದರತ್ತಲೇ ನಮ್ಮ ರಾಷ್ಟ್ರ ನೌಕೆಯು ಸಾಗುವಂತೆ ನಾವು ಕಾಯುವನ್ನು ಅರಳಿಸಬೇಕು. ಅದರಿಂದಲೇ ಭಾರತವು ಸುಖೀ ಜನಾಂಗವಾಗುವುದು.

(ಹ. ೧೯೪೭)

## ಆಂತರಿಕ ಸ್ವಾತಂತ್ರ್ಯ

ನಾವು ಪಡೆಯುವ ಬಾಹ್ಯ ಸ್ವಾತಂತ್ರ್ಯವು ನಾವು ಗಳಿಸಿ-ಕೊಳ್ಳುವ ಆಂತರಿಕ ಸ್ವಾತಂತ್ರ್ಯಕ್ಕೆ ಅನುಗುಣವಾಗಿರುತ್ತದೆ. ಇದು ಸ್ವಾತಂತ್ರ್ಯದ ಸರಿಯಾದ ಅರ್ಥವಾದರೆ, ನಾವು ನಮ್ಮ ಸರ್ವಶಕ್ತಿಯನ್ನೂ ಆಂತರಿಕ ಸ್ವಾತಂತ್ರ್ಯವನ್ನು ಪಡೆಯುವುದ-ಕ್ಕಾಗಿ ಉಪಯೋಗಿಸಿಕೊಳ್ಳಬೇಕು.

(ಯ. ಇ. ೧೯೨೯ ಪು. ೩೬೩)

## ಆತ್ಮ ದೌರ್ಬಲ್ಯವೇ ಗುಲಾಮಗಿರಿ

ತನ್ನಂತೆಯೇ ಇರುವ ಮಿತ್ರರ ಸಹಾಯದಿಂದಲೇ ದೆವ್ವವು ಜಯಗಳಿಸುತ್ತದೆ. ನಮ್ಮಲ್ಲಿರುವ ದೌರ್ಬಲ್ಯವನ್ನು ಕಂಡು-ಕೊಂಡು, ಅದರ ಲಾಭ ಪಡೆದು, ದೆವ್ವವು ನಮ್ಮ ಮೇಲೆ ಆಳಿಕೆ ನಡೆಸುತ್ತದೆ. ಹಾಗೆಯೇ, ಸರಕಾರವು ನಮ್ಮ ದುಶ್ಚಟಗಳ

ಮತ್ತು ದೌರ್ಬಲ್ಯಗಳ ಲಾಭಪಡೆದು ನಮ್ಮನ್ನು ಅಂಕಿತದಲ್ಲಿಟ್ಟು-ಕೊಳ್ಳುತ್ತದೆ. ನಾವು ಸ್ವತಂತ್ರರಾಗಿ, ಅದರ ದುರುದ್ದೇಶಕ್ಕೆ ಬಲಿಯಾಗದೇ ಇರಬೇಕಾದರೆ, ನಮ್ಮ ದೌರ್ಬಲ್ಯಗಳನ್ನು ಪರಿಹರಿಸಿಕೊಳ್ಳಬೇಕಾಗುವುದು. ಆದ್ದರಿಂದಲೇ ನಾನು 'ಅಸಹಕಾರ'ಕ್ಕೆ ಆತ್ಮಶುದ್ಧಿಯ ಸಾಧನ ಎಂದು ಕರೆದಿದ್ದೇನೆ. ಈ ಸಾಧನವನ್ನು ನಾವು ಪೂರಯಿಸಿದೊಡನೆಯೇ ಈ ಸರಕಾರವು ಕುಸಿದು ಬೀಳುವುದು. ಯಾಕಂದರೆ, ಅದಕ್ಕೆ ತನ್ನ ಆಟಸಾಗಿ-ಸಲು ತಕ್ಕ ಪರಿಸರವು ಇಲ್ಲದಂತಾಗಿ ಬಿಡುವುದು! ಕೊಳಚೆಯ ಪ್ರದೇಶವಿಲ್ಲದಿದ್ದಲ್ಲಿ ಗುಂಗಾಡುಗಳು ಹೇಗೆ ಬದುಕುವುವು? ಅಥವಾ ಅಭಿವೃದ್ಧಿ ಹೊಂದುವುವು?

(ಯ. ಇ. ಪು. ೨೧)

× × ×

ಸ್ವಾತಂತ್ರ್ಯದ ಪ್ರಥಮ ಹೆಜ್ಜೆಯು ವ್ಯಕ್ತಿಜೀವನದ ಸ್ವಾತಂತ್ರ್ಯದಲ್ಲಿಯೇ ಇದೆ. "ಪಿಂಡಾಂಡದಂತೆ ಬ್ರಹ್ಮಾಂಡ" ಅಥವಾ "ವ್ಯಕ್ತಿಯಂತೆ ವಿಶ್ವ" ಎಂಬ ಅಮರ ಸತ್ಯವು ಸ್ವಾತಂತ್ರ್ಯಕ್ಕೂ ಅನ್ವಯಿಸುತ್ತದೆ.

ಗಾಂಧಿಯವರ ಬರೆಹ-ಭಾಷಣಗಳು ಪು. ೪೮೯

## ಆತ್ಮ ಸ್ವಾತಂತ್ರ್ಯವೇ ಮೋಕ್ಷ

ಆತ್ಮಸ್ವಾತಂತ್ರ್ಯವೇ ನಿಜವಾದ ಸ್ವರಾಜ್ಯ, ಸ್ವಾತಂತ್ರ್ಯ. ಅದು ಮೋಕ್ಷದ ಮತ್ತೊಂದು ಹೆಸರು.

(ಯ. ಇ. ೧೯೨೦)

× × ×

ಜನತೆಯ ಸ್ವರಾಜ್ಯವೆಂದರೆ, ಸಕಲ ವ್ಯಕ್ತಿಗಳ ಆಂತರಿಕ ಸ್ವಾತಂತ್ರ್ಯಗಳ ಮೊತ್ತ.

(ಹ. ೧೯೩೯)

---

## ಸ್ವ-ಶಕ್ತಿಯೇ ಸ್ವಾತಂತ್ರ್ಯ

ಸ್ವಾತಂತ್ರ್ಯವು ಸಂಪೂರ್ಣವಾಗಿ ನಮ್ಮ ಆಂತರಿಕ ಶಕ್ತಿಯನ್ನವಲಂಬಿಸಿದೆ—ಅಂದರೆ ಎಂತಹ ವಿರುದ್ಧ ಶಕ್ತಿಗಳನ್ನಾದರೂ ಇದಿರಿಸಿ ಹೋರಾಡುವ ನಮ್ಮ 'ಸ್ವ-ಸಾಮರ್ಥ್ಯ'ವನ್ನೇ ಅವಲಂಬಿಸಿದೆ. ಈ ನಿರಂತರ ಸ್ವಪರಿಶ್ರಮದ ಶಕ್ತಿಯ ಅವಶ್ಯವಿಲ್ಲದೆ ಪಡೆಯುವ ಹಾಗೂ ಅನುಭವಿಸುವ ಸ್ವಾತಂತ್ರ್ಯವು ಸ್ವಾತಂತ್ರ್ಯವೆಂಬ ಹೆಸರಿಗೆ ಯೋಗ್ಯವಾದದ್ದಲ್ಲ. ಆದ್ದರಿಂದಲೇ ನಾನು ನನ್ನ ಮಾತಿನಿಂದಲೂ ಕೃತಿಯಿಂದಲೂ "ರಾಜಕೀಯ ಸ್ವಾತಂತ್ರ್ಯವೆಂದರೆ ವ್ಯಕ್ತಿಗಳ ಸ್ವಾತ್ಮ ನಿಯಂತ್ರಣಕ್ಕಿಂತ ಹೆಚ್ಚಿ-

ನವಲ್ಲ" ಎಂದು ಸಾರುತ್ತಲೇ ಬಂದಿದ್ದೇನೆ. ಆದ್ದರಿಂದ ಪ್ರತಿಯೊಂದು ವ್ಯಕ್ತಿಯೂ ತನ್ನನ್ನು ತಾನೇ ಎಷ್ಟರಮಟ್ಟಿಗೆ ಆಳಿಕೊಳ್ಳಬಲ್ಲುದೋ ಅಷ್ಟರಮಟ್ಟಿಗೆ ರಾಜಕೀಯ ಸ್ವಾತಂತ್ರ್ಯ ಪಡೆದಂತೆಯೇ ಎಂದು ತಿಳಿಯಬೇಕು.

---

# ಸ್ವಾತಂತ್ರ್ಯ-ಆತ್ಮಶುದ್ಧಿಯ ಚಳವಳಿ

ಇಂಗ್ಲೀಷರ ನೊಗದಿಂದಷ್ಟೇ ಭಾರತವನ್ನು ಬಿಡುಗಡೆಮಾಡುವುದರಲ್ಲಿ ನನಗೆ ಆಸಕ್ತಿ ಇಲ್ಲ. ಭಾರತವನ್ನು ಇತರ ನೊಗಗಳಿಂದಲೂ ಬಿಡುಗಡೆಮಾಡಲು ನಾನು ಉದ್ಯುಕ್ತನಾಗಿದ್ದೇನೆ. ಒಂದು ನೊಗವನ್ನು ಕಳಚಿ ಮತ್ತೊಂದು ನೊಗವನ್ನು ಹೇರಿಕೊಳ್ಳುವುದು ನನ್ನ ಉದ್ದೇಶವಲ್ಲ. ಆದ್ದರಿಂದಲೇ ನನ್ನ ಮಟ್ಟಿಗೆ ಸ್ವಾತಂತ್ರ್ಯವೆಂಬುದು ಆತ್ಮಶುದ್ಧಿಯ ಒಂದು ಚಳವಳಿಯಾಗಿ ಪರಿಣಮಿಸಿದೆ.

(ಯ. ಇ ೧೯೨೪)

---

## ಬಡವರ ಸ್ವಾತಂತ್ರ್ಯ

ನನ್ನ ಕಲ್ಪನೆಯ ಸ್ವಾತಂತ್ರ್ಯವು ಬಡವನ ಸ್ವಾತಂತ್ರ್ಯ. ಜೀವನಾವಶ್ಯಕ ವಸ್ತುಗಳೆಲ್ಲವೂ ಅರಸರಿಗೂ ರೊಕ್ಕಸ್ಥರಿಗೂ ದೊರೆಯುವಂತೆ ಬಡಜನರಿಗೂ ದೊರೆಯಬೇಕು. ಹಾಗೆಂದ-ಮಾತ್ರಕ್ಕೆ, ಬಡವರಿಗೆ ಅರಮನೆಗಳು ಸಿಗಬೇಕೆಂತಲ್ಲ. ಅರಮನೆ-ಗಳಿಂದ ನನಗಾಗಲೀ ಬಡಜನರಿಗಾಗಲೀ ಉಪಯೋಗವಿಲ್ಲ. ಶ್ರೀಮಂತನು ಅನುಭವಿಸುವ ಸುಖವಸ್ತುಗಳೆಲ್ಲವೂ ಬಡವನಿಗೂ ಸಿಗಬೇಕು. ಹಾಗಾಗುವವರೆಗೆ ಸ್ವಾತಂತ್ರ್ಯವು **ಪೂರ್ಣ ಸ್ವಾತಂತ್ರ್ಯ**ವೆನಿಸಲಾರದೆಂಬ ಬಗೆಗೆ ನನಗೆ ಯಾವ ಸಂದೇಹವೂ ಇಲ್ಲ.

(ಯ. ಇ. ೧೯೩೧ ಪು. ೪೬)

## ಪೂರ್ಣ ಸ್ವಾತಂತ್ರ್ಯವು ಪ್ರತ್ಯೇಕತೆಯಲ್ಲ

ಪೂರ್ಣ ಸ್ವಾತಂತ್ರ್ಯವೆಂದರೆ, ಯಾರ ಸಂಪರ್ಕವೂ ಇಲ್ಲದೆ ಸ್ವತಂತ್ರವಾಗಿರುವುದೆಂದು ನನ್ನ ಕಲ್ಪನೆಯಲ್ಲ. ಭದ್ರವಾಗಿಯೂ ಗೌರವಪೂರ್ಣವಾಗಿಯೂ ಅನ್ಯಸ್ವತಂತ್ರ ದೇಶಗಳೊಡನೆ ಪರಸ್ಪರಾವಲಂಬನದಿಂದಿರುವುದೇ **ಪೂರ್ಣ ಸ್ವಾತಂತ್ರ್ಯ**. ನನ್ನ ರಾಷ್ಟ್ರೀಯತೆಯು ಪ್ರಖರವಾಗಿದ್ದರೂ, ಅನ್ಯ ಸಂಪರ್ಕ-

ವಿಲ್ಲದೇ ಇರುವುದಲ್ಲ. ಯಾವ ವ್ಯಕ್ತಿಗಾಗಲೀ ಜನಾಂಗಕ್ಕಾಗಲೀ ಹಾನಿಯುಂಟುಮಾಡುವಂಥದೂ ಅಲ್ಲ. ಕಾಯುದೆಯಲ್ಲಿ ಬರುವ "ನಿನ್ನ ನೆರೆಹೊರೆಯವರಿಗೆ ಹಾನಿಯಾಗದಂತೆ ನೀನು ನಿನ್ನ ಸ್ವತ್ತನ್ನುಪಯೋಗಿಸು" ಎಂಬ ನೀತಿಯು ಮಾತಿನಂತಿದೆ ನನ್ನ **ಪೂರ್ಣ ಸ್ವಾತಂತ್ರ್ಯದ** ಉಪಯೋಗ.

(ಯ. ಇ. ೧೯೩೧ ಪು. ೫೧)

# ಸತತ ಪ್ರಯತ್ನದ ಫಲ-ಸ್ವಾತಂತ್ರ್ಯ

ಸ್ವಾತಂತ್ರ್ಯವು ಮುಗಿಲಿನಿಂದ ಉದುರಿ ಬೀಳುವುದಿಲ್ಲ; ಅದು ತಾಳ್ಮೆಯ, ಸತತ ಪ್ರಯತ್ನದ, ಧೈರ್ಯದ ಮತ್ತು ಪರಿಸ್ಥಿತಿಯ ಸದುಪಯೋಗದಿಂದ ಹುಟ್ಟುವ ಫಲವಾಗಿದೆ.

(ಯ. ಇ. ೧೯೨೫)

# ಸಮಾಜ ಸುಧಾರಣೆಯೇ ಸ್ವಾತಂತ್ರ್ಯ

ನಮ್ಮ ಸ್ವಾತಂತ್ರ್ಯದ ದಾರಿಯನ್ನು ಅನೇಕ ಸಾಮಾಜಿಕ ದುಷ್ಟ ರೂಢಿಗಳು ಅಡ್ಡಗಟ್ಟಿವೆಂಬುವನ್ನು ತಿಳಿದುಕೊಂಡಷ್ಟಕ್ಕೂ ನಮ್ಮ ಪ್ರಗತಿಯು ತ್ವರಿತಗತಿಯದಾಗುವುದು. ಸ್ವಾತಂತ್ರ್ಯ

ಪ್ರಾಪ್ತಿಯಾಗುವವರೆಗೆ ಸಾಮಾಜಿಕ ಸುಧಾರಣೆಗೆ ಕೈಹಾಕ-ಬಾರದು, ಅಥವಾ ಅಲ್ಲಿಯ ತನಕ ಅದನ್ನು ಮುಂದರಿಸಬೇಕು ಎಂದು ಹೇಳುವವರಿಗೆ ಸ್ವಾತಂತ್ರ್ಯದ ಅರ್ಥವೇ ತಿಳಿದಿಲ್ಲವೆನ್ನ-ಬೇಕಾಗುವುದು.

(ಯಂ. ಇ. ೧೯೨೮)

× × ×

ಸಾಮಾಜಿಕ ಪುನರ್ಘಟನೆ ಮತ್ತು ರಾಜಕೀಯ ಸ್ವಾತಂತ್ರ್ಯದ ಹೋರಾಟ ಇವೆರಡೂ ಒಟ್ಟಾಗಿಯೇ, ಕೈಕೈ-ಹಿಡಿದುಕೊಂಡು, ಸಾಗಬೇಕು. ಇದರಲ್ಲಿ ಯಾವುದು ಮೊದಲು ಅಥವಾ ಒಂದಕ್ಕೊಂದು ತೀರ ಬೇರೆಯಾಗಿಯೇ ಇರಬೇಕು ಎಂಬ ಪ್ರಶ್ನೆಯೇ ಏಳುವುದಿಲ್ಲ. ಆದರೆ, ರೋಗಕ್ಕಿಂತ ಔಷಧ ಹಾನಿಕರವೆಂಬಂತೆ ಹೊಸ ಸಾಮಾಜಿಕ ವ್ಯವಸ್ಥೆಯು ಒತ್ತಾಯ-ದಿಂದ ಹೇರಲ್ಪಡಕೂಡದು. ಸಾಮಾಜಿಕ ಸುಧಾರಣೆಯಲ್ಲಿ ವಿಳಂಬವನ್ನು ನಾನು ಸಹಿಸೆನು. ತೀವ್ರತರವಾದ ಹಾಗೂ ಆಮೂಲಾಗ್ರವಾದ ಸಾಮಾಜಿಕ ಪುನರ್ವ್ಯವಸ್ಥೆಯನ್ನು ನಾನು ಸಂಪೂರ್ಣವಾಗಿ ಬೆಂಬಲಿಸುತ್ತೇನೆ. ಅದು ತಾನಾಗಿಯೇ ಬೆಳೆ-ಯುತ್ತ ಹೋಗಬೇಕೇ ಹೊರತು ಹೊರಗಣಿಂದ ಒತ್ತಾಯ-ದಿಂದ ಹೇರಲ್ಪಡಬಾರದು.

(ಅಮೃತಬಜಾರ ಪತ್ರಿಕೆ ೧೯೩೪)

---

# ಗ್ರಾಮ ರಾಜ್ಯವೇ ಸ್ವಾತಂತ್ರ್ಯ

ನನ್ನ ಕಲ್ಪನೆಯ ಗ್ರಾಮಸ್ವಾತಂತ್ರ್ಯದಲ್ಲಿ ಗ್ರಾಮವೊಂದು ಪರಿಪೂರ್ಣ ಪ್ರಜಾರಾಜ್ಯವಾಗುವುದು. ಅದು ತನ್ನ ಮುಖ್ಯ ಆವಶ್ಯಕತೆಗಳ ಬಗೆಗೆ ಸಂಪೂರ್ಣ ಸ್ವತಂತ್ರವಾಗಿದ್ದು, ಪರಾವಲಂಬನವು ಅನಿವಾರ್ಯವಾಗಿರುವ ವಸ್ತುಗಳ ಅಥವಾ ವಿಷಯಗಳ ಬಗೆಗೆ ಹತ್ತಿರದ ಹಳ್ಳಿಗಳೊಡನೆ ಪರಸ್ಪರ ಅವಲಂಬನ ಉಳ್ಳದ್ದಾಗುವುದು. ಹೀಗೆ, ಪ್ರತಿಯೊಂದು ಗ್ರಾಮವೂ ತನಗೆ ಬೇಕಾಗುವ ಆಹಾರ ಧಾನ್ಯಗಳನ್ನೂ ಬಟ್ಟೆಗೆ ಬೇಕಾಗುವ ಹತ್ತಿಯ ಬೆಳೆಯನ್ನೂ ಬೆಳೆಸಿಕೊಳ್ಳುವುದು. ಗ್ರಾಮದ ದನಕರುಗಳಿಗೆ ಮೇಯಲು ಕಾದಿಟ್ಟ ಹುಲ್ಲುಗಾವಲು, ಮಕ್ಕಳಿಗೂ ಪ್ರೌಢರಿಗೂ ಆಟದ ಬಯಲು ಇರತಕ್ಕದ್ದು. ಆಹಾರಧಾನ್ಯದ ಬೆಳೆಗೆ ಸಾಕಾಗಿ ಹೆಚ್ಚಾಗುವ ಜಮೀನಿನಲ್ಲಿ ಗಾಂಜಾ, ತಂಬಾಕು, ಅಫೀಮು ಮೊದಲಾದ ಮಾದಕ ಪದಾರ್ಥಗಳ ಬೆಳೆಯನ್ನು ಹಾಕದೆ ಇತರ ರೊಕ್ಕದ ಬೆಳೆಗಳನ್ನು ಬೆಳೆಸತಕ್ಕದ್ದು. ಗ್ರಾಮದಲ್ಲಿ ಗ್ರಾಮ ನಾಟ್ಯಗೃಹ, ಶಾಲೆ, ಸಾರ್ವಜನಿಕ ಸಭಾಗೃಹಗಳು ಇರತಕ್ಕದ್ದು. ಸ್ವಚ್ಛ ನೀರನ್ನೊದಗಿಸುವ ನೀರಿನ ಪೂರೈಕೆಯ ವ್ಯವಸ್ಥೆ ಇರತಕ್ಕದ್ದು. ಜೀವನ ಶಿಕ್ಷಣದ ಕೊನೆಯ ಹಂತದ ವರೆಗೂ ಕಡ್ಡಾಯದ ಶಿಕ್ಷಣವಿರತಕ್ಕದ್ದು. ಶಕ್ಯವಿದ್ದ ಮಟ್ಟಿಗೆ

ಎಲ್ಲ ಚಟುವಟಿಕೆಗಳೂ ಸಹಕಾರ ತತ್ತ್ವದ ತಳಹದಿಯಮೇಲೆ ನಡೆಯತಕ್ಕದ್ದು. ಈಗಿರುವಂತೆ ಅಸ್ಪೃಶ್ಯತೆಯತರಹದ ಮೇಲು-ಕೀಳು ಭಾವನೆಯ ಜಾತಿಗಳಿರಕೂಡದು. ಗ್ರಾಮವಾಸಿಗಳಿಗೆ ಅಹಿಂಸಾತ್ಮಕ ಸತ್ಯಾಗ್ರಹ ಮತ್ತು ಅಸಹಕಾರಗಳೇ ಅವರ ಸಾಮೂಹಿಕ ಶಕ್ತಿಯಾಗಿರತಕ್ಕದ್ದು. ಗ್ರಾಮರಕ್ಷಕ ದಳವನ್ನು ರಚಿಸಿ, ಪ್ರತಿಯೊಬ್ಬರೂ ಪಾಳಿಯ ಪ್ರಕಾರ ತಮ್ಮ ತಮ್ಮ ಸೇವೆ ಸಲ್ಲಿಸತಕ್ಕದ್ದು. ಗ್ರಾಮದ ಪ್ರೌಢ ಸ್ತ್ರೀಪುರುಷರಿಂದ ಚುನಾ-ಯಿತರಾದ ಐದು ಮಂದಿಯ ಗ್ರಾಮ ಪಂಚಾಯತವೇ ಗ್ರಾಮದ ಸರಕಾರವಾಗಿರತಕ್ಕದ್ದು. ಅದಕ್ಕೆ ಇಡೀ ಗ್ರಾಮದ ಮೇಲೆ ಅಧಿಕಾರವಿರತಕ್ಕದ್ದು. ಹಾಗೂ ಅದು ಇಡೀ ಗ್ರಾಮದ ನ್ಯಾಯಾಲಯ, ಶಾಸನಸಭೆ, ಹಾಗೂ ಶಾಸನಾಂಗವಾಗಿ ಗ್ರಾಮದ ಆಡಳಿತ ಸಾಗಿಸತಕ್ಕದ್ದು....ಇದರಲ್ಲಿ ವೈಯಕ್ತಿಕ ಸ್ವಾತಂತ್ರ್ಯದ ತಳಹದಿಯಮೇಲೆ ರಚಿತವಾದ ಪ್ರಜಾಸತ್ತೆಯು ಅಡಕವಾಗಿದೆ. ವ್ಯಕ್ತಿಯೇ ತನ್ನ ಸರಕಾರದ ಶಿಲ್ಪಿಯಾಗುವನು, ಹಾಗೂ ಅಹಿಂಸೆಯೇ ಅವನ ಮತ್ತು ಅವನ ಗ್ರಾಮ ಸರಕಾರದ ಕಾಯಿದೆಯಾಗುವುದು. ಆತನೂ ಆತನ ಸರಕಾರವೂ ಇಡೀ ಜಗತ್ತಿನ ವಿರೋಧವನ್ನೇ ಇದಿರಿಸುವಷ್ಟು ಶಕ್ತಿವಂತವಾಗುವವು. ತನ್ನ ಮತ್ತು ತನ್ನ ಗ್ರಾಮದ ಗೌರವ ರಕ್ಷಣೆಗಾಗಿ ಪ್ರಾಣಾರ್ಪಣ ಮಾಡುವುದೇ ಆತನ ನೀತಿಯಾಗುವುದು.

(ಹ. ೯೪೨)

## ಸ್ವಾತಂತ್ರ್ಯ ಮತ್ತು ವಿಕೇಂದ್ರೀಕರಣ

ಅಹಿಂಸಾತ್ಮಕವಾಗಿ ರೂಪಿತವಾಗುವ ಸ್ವತಂತ್ರ ಭಾರತವು ವಿಕೇಂದ್ರೀಕರಣ ತತ್ತ್ವವನ್ನು ಸ್ವೀಕರಿಸಲೇಬೇಕಾಗುವುದೆಂದು ನಾನು ಸೂಚಿಸುತ್ತೇನೆ. ಸಾಕಷ್ಟು ಹಿಂಸೆ ಇಲ್ಲದೆ ಕೇಂದ್ರೀಕರಣವನ್ನುಳಿಸಿಕೊಳ್ಳುವುದು ಅಶಕ್ಯ. ಕಸಿದುಕೊಳ್ಳಲು ಅಮೂಲ್ಯವಾದ ಸ್ವತ್ತುಗಳಿಲ್ಲದ ಸಾದಾ ಮನೆಗಳನ್ನು ರಕ್ಷಿಸಲು ಪೋಲೀಸರ ಆವಶ್ಯವಿಲ್ಲ. ಶ್ರೀಮಂತರ ಅರಮನೆಗಳನ್ನು ಮಾತ್ರ ದರೋಡೆಗಾರರಿಂದ ರಕ್ಷಿಸಲು ಪೋಲೀಸರ ಕಾವಲು ಬೇಕಾಗುವುದು. ಹಾಗೆಯೇ ದೊಡ್ಡ ಕಾರಖಾನೆಗಳಿಗೂ ಕೂಡ. ಗ್ರಾಮೀಣವಾಗಿ ಅರಳಿದ ಭಾರತಕ್ಕೆ, ಉದ್ಯಮೀಕೃತ ಭಾರತಕ್ಕೆ ಇರುವಂತಹ ಪರದಾಳಿಯ ಭೀತಿ ಇರುವದಿಲ್ಲ. ಆದಕ್ಕೆ ಸುಸಜ್ಜಿತವಾದ ಭೂ-ಜಲ-ವಾಯು ಸೈನ್ಯ ಪಥಕಗಳ ಆವಶ್ಯವಿರುವುದಿಲ್ಲ.

(ಹ. ೧೯೩೯)

# ವಿಧಾಯಕ ಕಾರ್ಯದಿಂದ ಸ್ವಾತಂತ್ರ್ಯ

ಭಾರತದ ಜನಕೋಟಿಯು 'ವಿಧಾಯಕ ಕಾರ್ಯಕ್ರಮ'ವನ್ನು ಕಾರ್ಯಗತಗೊಳಿಸುವುದೇ ನಿಜವಾದ ಸ್ವಾತಂತ್ರ್ಯ ಎನಿಸುವುದು. ಹಾಗೆ ಮಾಡದೆ ಜನಾಂಗವು ತನ್ನ ದೀರ್ಘಾವಧಿಯ ಜಡತ್ವದಿಂದ ಎಚ್ಚರವಾಗಿ ಏಳಲಾರದು. ಬ್ರಿಟಿಶರು ಹೋಗಲಿ, ಇಲ್ಲವೆ ಇರಲಿ, ನಿರುದ್ಯೋಗವನ್ನು ನಿವಾರಿಸುವುದೂ, ಶ್ರೀಮಂತ ದರಿದ್ರರ ನಡುವಣ ಅಂತರವನ್ನು ಕಡಿಮೆಮಾಡುವುದೂ, ಜಾತೀಯ ಸೌಹಾರ್ದವನ್ನುಂಟುಮಾಡಿ, ಅಸ್ಪೃಶ್ಯತೆಯ ದೆವ್ವವನ್ನು ಹೊಡೆದೋಡಿಸುವುದೂ, ದರೋಡೆಖೋರರನ್ನು ಸುಧಾರಿಸುವುದೂ ನಮ್ಮ ನಿತ್ಯ ಕರ್ತವ್ಯವಾಗಿರಬೇಕು. ಜನಕೋಟಿಯು ಈ ರಾಷ್ಟ್ರೋದ್ಧಾರ ಕಾರ್ಯದಲ್ಲಿ ಆಸಕ್ತಿ ವಹಿಸದಿದ್ದರೆ, ಅಹಿಂಸಾತ್ಮಕವಾಗಿಯಾಗಲೀ ಹಿಂಸಾತ್ಮಕವಾಗಿಯಾಗಲೀ ಸ್ವಾತಂತ್ರ್ಯವನ್ನು ಪಡೆಯುವುದು ಕನಸೇ ಸರಿ!

(ಗಾಂಧೀಜೀ ಪತ್ರವ್ಯವಹಾರ ಸರಕಾರದೊಡನೆ ಪು. ೩೫೪)

—— ——

## "ಸ್ವಾತಂತ್ರ್ಯವು ಚರಖಾದಲ್ಲಿದೆ"

"ಸ್ವಾತಂತ್ರ್ಯವು ಚರಖದಲ್ಲಿದೆ"— ಎಂದೊಮ್ಮೆ ನಾನು ಹೇಳಿದೆನು; ಆಮೇಲೆ, "ಸ್ವಾತಂತ್ರ್ಯವು ಮದ್ಯಪಾನ ನಿಷೇಧ-ದಲ್ಲಿದೆ" ಎಂದೆನು. ಹಾಗೆಯೇ "ಸ್ವಾತಂತ್ರ್ಯವು ಸಂಪೂರ್ಣ ಸ್ವದೇಶಿಯಲ್ಲಿದೆ" ಎಂದು ಹೇಳುತ್ತೇನೆ. ಸ್ವಾತಂತ್ರ್ಯದ ಈ ವರ್ಣನೆಯು ಕುರುಡರು ಆನೆಯನ್ನು ವರ್ಣಿಸಿದಂತೆಯೇ ಇದೆ— ಎಲ್ಲರ ವರ್ಣನೆಯೂ ಸರಿಯಾದವೇ. ಆದರೆ ಆನೆಯನ್ನು ಸಮಗ್ರ ವಾಗಿ ವರ್ಣಿಸಿದಂತಾಗಿಲ್ಲ, ಅಷ್ಟೆ.

(ಹ. ೧೯೩೪)

## ಯತ್ನಶೀಲತೆಯೂ ಸ್ವಾತಂತ್ರ್ಯ

ಸ್ವಾತಂತ್ರ್ಯಕ್ಕಾಗಿ ಮಾಡುವ ಪ್ರಯತ್ನವೂ ಸ್ವಾತಂತ್ರ್ಯವೇ. ಆದರೆಡೆಗೆ ನಾವು ಜೋರಾಗಿ ಓಡುತ್ತ ಹೋದಂತೆ ಅದು ಮತ್ತಷ್ಟು ದೂರದಲ್ಲಿರುವಂತೆ ತೋರುತ್ತದೆ. ಎಲ್ಲ ಆದರ್ಶಗಳೂ ಹೀಗೆಯೇ ಇರುತ್ತವೆ.

(ಬರೆಹಗಳು ಭಾಷಣಗಳು ಪು. ೬೮೫)

## ಆದರ್ಶ ಸ್ವಾತಂತ್ರ್ಯ

ನನಗೆ ರಾಜಕೀಯ ಸ್ವಾತಂತ್ರ್ಯವೇ ಸರ್ವಸ್ವವಲ್ಲ. ಜನರು ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಅಭಿವೃದ್ಧಿ ಹೊಂದಲಿಕ್ಕೆ ಅದೊಂದು ಸಾಧನಮಾತ್ರ. ರಾಜಕೀಯಾಧಿಕಾರವೆಂದರೆ ಜನರು ತಮ್ಮ ಪ್ರತಿನಿಧಿಗಳ ಮೂಲಕವಾಗಿ ತಮ್ಮ ರಾಷ್ಟ್ರೀಯ ಜೀವನವನ್ನು ನಿಯಂತ್ರಿಸಿಕೊಳ್ಳುವುದು. ರಾಷ್ಟ್ರ ಜೀವನವು ತನ್ನನ್ನು ತಾನೇ ನಿಯಂತ್ರಿಸಿಕೊಳ್ಳುವಷ್ಟು ಪರಿಪೂರ್ಣತೆ ಪಡೆದರೆ, ಪ್ರತಿನಿಧಿತ್ವದ ಅವಶ್ಯವೇ ಇರುವುದಿಲ್ಲ. ಅದೊಂದು-ಬಗೆಯ ಜ್ಞಾನಿಗಳ ಅರಾಜಕತೆಯಾಗುವುದು. ಅಂತಹ ರಾಜ್ಯ-ದಲ್ಲಿ ಪ್ರತಿಯೊಬ್ಬನೂ ತನಗೆ ತಾನೇ ಆಳಿಕೊಳ್ಳುವವನಾಗು-ತ್ತಾನೆ. ಆತನು ತನ್ನ ನೆರೆಹೊರೆಯವರಿಗೆ ತುಸುವಾದರೂ ತೊಂದರೆಯಾಗದಂತೆ ತನ್ನನ್ನು ತಾನೇ ನಿಯಂತ್ರಿಸಿಕೊಳ್ಳುವನು. ಇಂತಹ ಆದರ್ಶ ರಾಜ್ಯದಲ್ಲಿ ರಾಜಕೀಯಾಧಿಕಾರವೇ ಇರುವು-ದಿಲ್ಲ. ಯಾಕೆಂದರೆ, ಅದಕ್ಕೆ ಯಾವ ಸರಕಾರವೂ ಇರುವುದಿಲ್ಲ. ಆದರೆ ಈ ಆದರ್ಶವನ್ನು ಜೀವನದಲ್ಲಿ ಪೂರ್ಣವಾಗಿ ಮುಟ್ಟುವುದು ಅಶಕ್ಯ. ಆದ್ದರಿಂದಲೇ ಥೋರೋ ಅವರು ಹೀಗೆ ಸೂತ್ರಿ-ಸಿದ್ದಾರೆ— ಯಾವ ಸರಕಾರದ ಆಳಿಕೆಯು ತೀರ ಕಡಿಮೆ-ಯಾಗಿರುತ್ತದೋ ಅದೇ ಅತ್ಯುತ್ತಮ ಸರಕಾರ.

(ಯ. ಇ. ೧೯೩೧)

---

# ಹೊಸ ಬಗೆಯ ರಾಷ್ಟ್ರ ಸ್ವಾತಂತ್ರ್ಯ

ಅಹಿಂಸಾತ್ಮಕವಾಗಿ ಸ್ಥಾಪಿಸುವ ಸ್ವಾತಂತ್ರ್ಯವು ದಂಗೆ ಎದ್ದು ಹಿಂಸಾತ್ಮಕವಾಗಿ ಪಡೆಯುವ ಸ್ವಾತಂತ್ರ್ಯಕ್ಕಿಂತ ತೀರ ಬೇರೆತರದ್ದೇ ಆಗುವುದೆಂಬ ಬಗ್ಗೆ ಯಾವ ಬಗೆಯ ಸಂದೇಹವೂ ಬೇಡ.

(ಯಂ. ಇ. ೧೯೨೨)

× × ×

ಹಿಂಸಾತ್ಮಕ ಮಾರ್ಗವು ಹಿಂಸಾತ್ಮಕವಾದ ಸ್ವಾತಂತ್ರ್ಯವನ್ನು ತಂದುಕೊಡುವುದು. ಅದು ಜಗತ್ತಿಗೆ ಅನಿಷ್ಟಕಾರಕವಾಗುವುದಲ್ಲದೇ ಭಾರತಕ್ಕೂ ಶಾಪಕರವಾಗುವುದು.

(ಯಂ. ಇ. ೧೯೨೪)

× × ×

ಹಿಂಸಾತ್ಮಕ ಮಾರ್ಗಗಳಿಂದ ಪ್ರಜಾಸತ್ತೆಯೆಂಬ ಸ್ವಾತಂತ್ರ್ಯವನ್ನು ಪಡೆಯಲಾರೆವೆಂಬುದು ನನ್ನ ಅಭಿಪ್ರಾಯ. ಪ್ರಜಾಸತ್ತೆಯ ಜೀವಾಳವು ಹೊರಗಿನಿಂದ ಬರುವುದಲ್ಲ. ಅದು ಒಳಗಿನಿಂದಲೇ ಉದಯಿಸಬೇಕು.

(ಹಿಸ್ಟರಿ ಆಫ್ ಕಾಂಗ್ರೆಸ್ ಪು. ೯೨೨)

# ಜಗತ್ತಿಗೇ ಮಾರ್ಗದರ್ಶಕ ಸ್ವಾತಂತ್ರ್ಯ

ನಾನು ಭಾರತದ ಸ್ವಾತಂತ್ರ್ಯಕ್ಕಾಗಿಯೇ ಜೀವಿಸುತ್ತಿದ್ದು, ಅದಕ್ಕಾಗಿಯೇ ಸಾಯುವೆನು. ಯಾಕೆಂದರೆ, ಭಾರತದ ಸ್ವಾತಂತ್ರ್ಯವು ನನಗೆ ಸತ್ಯದ ಅಂಗವೇ ಆಗಿದೆ. ಸ್ವತಂತ್ರ ಭಾರತವು ಮಾತ್ರವೇ ನಿಜವಾದ ದೇವರನ್ನು ಪೂಜಿಸುವುದು. ನಾನು ಭಾರತದ ಸ್ವಾತಂತ್ರ್ಯಕ್ಕಾಗಿ ಏಕೆ ದುಡಿಯುತ್ತಿರುವೆನೆಂದರೆ, ನಾನು ಭಾರತದಲ್ಲಿ ಹುಟ್ಟಿ ಅದರ ಸಂಸ್ಕೃತಿಯ ಬಾಧ್ಯಸ್ಥನಾಗಿರುವುದರಿಂದ ಸ್ವದೇಶೀ ತತ್ತ್ವದಂತೆ ಮೊಟ್ಟಮೊದಲು ನಾನು ಭಾರತದ ಸಲುವಾಗಿಯೇ ಕೆಲಸಮಾಡಬೇಕಾಗಿದೆ. ಆದರೂ ನನ್ನ ಸ್ವದೇಶಾಭಿಮಾನವು ನನ್ನ ದೇಶಕ್ಕಷ್ಟೇ ಮೀಸಲಾಗಿಲ್ಲ. ಅನ್ಯ ಯಾವ ಜನಾಂಗಕ್ಕೂ ಅದರಿಂದ ಹಾನಿಯಾಗಬಾರದಷ್ಟೇ ಅಲ್ಲದೆ, ಸಹಾಯವಾಗಬೇಕು. ನನ್ನ ಕಲ್ಪನೆಯ 'ಭಾರತ ಸ್ವಾತಂತ್ರ್ಯ'ವು ಜಗತ್ತಿಗೆ ಎಂದಿಗೂ ಹಾನಿಕಾರಕವಾಗುವುದಲ್ಲ.

(ಯ. ಇ. ೧೯-೨೪)

× × ×

ನಮ್ಮ ದೇಶಕ್ಕೆ ಸ್ವಾತಂತ್ರ್ಯಬೇಕೆಂದು ನಾವು ಇಚ್ಛಿಸುತ್ತೇವೆ. ಯಾವ ದೇಶಗಳಿಗೂ ಹಾನಿಮಾಡಿ, ಅಥವಾ ಅವುಗಳನ್ನು

ಶೋಷಿಸಿ, ಅಥವಾ ಅವಮಾನಪಡಿಸಿ ನಾವು ಸ್ವಾತಂತ್ರ್ಯವನ್ನು ಪಡೆಯಲಿಚ್ಛಿಸುವುದಿಲ್ಲ. ಇಂಗ್ಲೆಂಡಿನ ಅಥವಾ ಆಂಗ್ಲ ಜನಾಂಗದ ನಾಶವಾಗುವುದರಿಂದಲೇ ಭಾರತದ ಸ್ವಾತಂತ್ರ್ಯವು ಸಿದ್ಧಿಸುವುದಾದರೆ, ನನಗದು ಬೇಡ. ಸ್ವತಂತ್ರವಾಗುವ ನನ್ನ ದೇಶದಿಂದ ಅನ್ಯದೇಶಗಳು ಕಲಿಯುವುದಿದೆ, ಹಾಗೂ ನನ್ನ ದೇಶದ ಸಂಪತ್ತಿನ ಸದುಪಯೋಗದಿಂದ ಮಾನವಕೋಟಿಗೆ ಹಿತವಾಗುವುದಿದೆ— ಎಂಬುದರಿಂದಲೇ ನನಗೆ "ಭಾರತದ ಸ್ವಾತಂತ್ರ್ಯ"ವು ಬೇಕಾಗಿದೆ.

(ಗ್ರಾಮಾಂತರ ಭಾರತದಲ್ಲಿ ಗಾಂಧೀಜಿ. ಪು. ೧೭೦)

## ಸ್ತ್ರೀ ಸ್ವಾತಂತ್ರ್ಯ

ಸ್ವತಂತ್ರ ಭಾರತದಲ್ಲಿ ಸ್ತ್ರೀಯರಿಗೆ ಪೂರ್ಣ ಸ್ವಾತಂತ್ರ್ಯವಿರಬೇಕೆಂದು ನಾನು ದೃಢವಾಗಿ ಆಶಿಸುತ್ತೇನೆ. ಬಾಲ ವಿವಾಹವನ್ನು ನಾನು ತೀವ್ರವಾಗಿ ನಿಷೇಧಿಸುತ್ತೇನೆ. ಬಾಲವಿಧವೆಯನ್ನು ನೋಡಿ ನನಗೆ ಮೈನಡುಗುತ್ತದೆ; ಹೆಂಡತಿ ಸತ್ತೊಡನೆಯೇ ವಿಧುರನು ಮತ್ತೊಂದು ಮದುವೆಗೆ ಸಿದ್ಧನಾಗುವುದನ್ನು ನೋಡಿ ನಾನು ಸಂತಾಪದಿಂದ ನಡುಗುತ್ತೇನೆ. ತಾಯ್ತಂದೆಗಳು ತಮ್ಮ ಹೆಣ್ಣುಮಕ್ಕಳನ್ನು ಅಜ್ಞಾನದಲ್ಲಿಟ್ಟು, ಒಬ್ಬ ಅನುಕೂಲಸ್ಥ ವರನಿಗೆ ಕೊಡುವುದಕ್ಕಾಗಿಯೇ ಅವರನ್ನು ಸಾಕುತ್ತಿರುವುದನ್ನು ಕಂಡರೆ ಅವರೆಂತಹ ಕ್ರೂರ ಹೃದಯಿಗಳಾದ ಅಪರಾಧಿಗಳೆಂಬ

ಭಾವನೆ ಆಗುತ್ತದೆ. ನನಗೆ ಇಷ್ಟೊಂದು ಸಂಕಟವೂ ಆಕ್ರೋ-ಶವೂ ಆದರೂ ಈ ಸಮಸ್ಯೆಯು ಜಟಿಲವೆಂಬುದನ್ನು ನಾನು ತಿಳಿದಿದ್ದೇನೆ. ಸ್ತ್ರೀಯರಿಗೆ ಮತಾಧಿಕಾರವಿರಬೇಕು. ಕಾಯಿದೆಯ ಪ್ರಕಾರವಾಗಿ ಅವರಿಗೆ ಪುರುಷರೊಡನೆ ಸಮಾನವಾದ ಸ್ಥಾನ ಗೌರವ ಇರಬೇಕು. ಅಷ್ಟರಿಂದಲೇ ಸ್ತ್ರೀಯರ ಸಮಸ್ಯೆಯು ಬಗೆಹರಿಯದು. ಸ್ತ್ರೀಯರು ರಾಷ್ಟ್ರೀಯ ಸಮಸ್ಯೆಗಳ ಚರ್ಚೆ-ಯಲ್ಲಿ ಭಾಗವಹಿಸತೊಡಗಿದಾಗಲೇ ಅವರ ಸಮಸ್ಯೆಯು ಪ್ರಾರಂಭವಾಗುವುದು.

(ಯ. ಇ. ೧೯೨೧)

# ಮಿತಸಂತತಿಯು ಸ್ವಾತಂತ್ರ್ಯ

ಜನಸಂಖ್ಯೆಯ ಹೆಚ್ಚಿನ ಬೆಳವಣಿಗೆಯನ್ನು ತಡೆಗಟ್ಟುವ ಸಲುವಾಗಿ ಸಂತತಿ ಪ್ರತಿಬಂಧಕ ಉಪಾಯಗಳನ್ನು ಜಾರಿಗೆ ತರ-ಬೇಕೆಂದು ವಾದಿಸಲಾಗುತ್ತಿದೆ. ಅದಕ್ಕೆ ನನ್ನ ವಿರೋಧವಿದೆ. ಭೂಮಿಯ ಸರಿಯಾದ ವಿತರಣ, ಉತ್ತಮ ವ್ಯವಸಾಯ ಪದ್ಧತಿ, ಹಾಗೂ ಉಪದಂಧೆಗಳನ್ನು ಉಂಟುಮಾಡಿಕೊಟ್ಟರೆ, ನಮ್ಮ ದೇಶವು ಈಗಿನ ಇಮ್ಮಡಿ ಜನಸಂಖ್ಯೆಯನ್ನು ಪೋಷಿಸಲು ಸಮರ್ಥವಾಗುವುದು. ಅಸ್ವತಂತ್ರ ಭಾರತದ ಈಗಿನ ಪರಿಸ್ಥಿತಿ-ಯನ್ನು ಲಕ್ಷಿಸಿ ನಾನು ಮಿತಸಂತಾನದ ಅವಶ್ಯಕತೆಯನ್ನು ಒಪ್ಪಿ-ಕೊಳ್ಳುತ್ತಿದ್ದೇನಷ್ಟೆ. ಸಂತತಿ ಪ್ರತಿಬಂಧವನ್ನು ಇಂದ್ರಿಯನಿಗ್ರಹ-

ದಿಂದ ಜಾರಿಗೆ ತರಬೇಕೇ ಹೊರತು ಯಾಂತ್ರಿಕ ಸಲಕರಣೆಗಳ ಮೂಲಕವಾಗಿ ಅಲ್ಲ.

(ಯ. ಇ. ೧೯೨೫)

## ಭಾರತ ಸ್ವಾತಂತ್ರ್ಯದ ವೈಶಿಷ್ಟ್ಯ

ನನ್ನ ಕಲ್ಪನೆಯ ಸ್ವಾತಂತ್ರ್ಯವೆಂದರೆ, ನಮ್ಮ ನಾಗರಿಕತೆಯ ವೈಶಿಷ್ಟ್ಯವನ್ನು ಕಾಪಾಡಿಕೊಳ್ಳುವುದು. ಅನೇಕ ಹೊಸ ವಿಷಯಗಳನ್ನು ನಾನು ಬರೆಯಲಾಶಿಸುತ್ತೇನೆ. ಆದರೆ ಅವೆಲ್ಲವೂ ಭಾರತೀಯ 'ಪಾಟಿ'ಯ ಮೇಲೆ ಬರೆಯಲ್ಪಡತಕ್ಕದ್ದು. ಯೋಗ್ಯವಾದ ಬಡ್ಡಿ ಸಹಿತ ಹಿಂದೆ ಕೊಡಲು ಸಾಧ್ಯವಾದಾಗ ಪಾಶ್ಚಿಮಾತ್ಯರಿಂದಲೂ ನಾನು ಎರವಲು ತೆಗೆದುಕೊಳ್ಳುವೆನು.

(ಯ. ಇ. ೧೯೨೪)

## ಸ್ವಾತಂತ್ರ್ಯದ ಏರುದಾರಿ

ಸ್ವಾತಂತ್ರ್ಯದ ಯಾತ್ರೆಯು ಆಯಾಸಕರವಾದ ಏರುದಾರಿಯಾಗಿದೆ. ಅದರಲ್ಲಿ ಸಣ್ಣ ವಿಷಯಗಳನ್ನೂ ಲಕ್ಷಿಸಬೇಕಾಗುವುದು. ಅದಕ್ಕಾಗಿ ದೊಡ್ಡ ಸಂಘಟನೆಬೇಕು. ಹಳ್ಳಿಗರ ಸೇವೆಗಾಗಿ ಹಳ್ಳಿಗಳಲ್ಲಿಯೂ ಸಂಘಟನೆ ಹರಡಬೇಕು. ಅರ್ಥಾತ್, ಅದಕ್ಕೆ ಜನ-

ಜಾಗ್ರತಿಯೆಂಬ ರಾಷ್ಟ್ರೀಯ ಶಿಕ್ಷಣಬೇಕು. ಜನತೆಯಲ್ಲಿ ರಾಷ್ಟ್ರೀ-ಯತಾಭಾವನೆಯು ಜಾಗ್ರತವಾಗಬೇಕು. ಆ ಭಾವನೆಯು ಡೊಂಬರವನ ಮಾಯಕದ ಮಾವಿನ ಹಣ್ಣಿನಂತೆ ಸಟಕ್ಕನೆ ಹುಟ್ಟುವುದಿಲ್ಲ; ಆಲದ ಮರದಂತೆ ಅದು ಅದೃಶ್ಯವಾಗಿ ಬೆಳೆಯುತ್ತ ಹೋಗಬೇಕಾಗುವುದು. ಹಿಂಸಾತ್ಮಕ ಕ್ರಾಂತಿಯು ಅದಕ್ಕೆ ಉಪಾಯವಲ್ಲ. ಅವಸರದಿಂದ ನಿಜವಾಗಿಯೂ ಹಾನಿ-ಯಾಗುವುದು.

(ಯ. ಇ. ೧೯೨೫)

× × ×

"ಸ್ವರಾಜ್ಯ"ವೆಂಬ ಪದವು ಪವಿತ್ರವಾದ ಪದವು. ಅದೊಂದು ವೈದಿಕ ಪದವು. ಅದರ ಅರ್ಥವು ಆತ್ಮನಿಯಂತ್ರಣ ಮತ್ತು ಆತ್ಮಸಂಯಮ ಎಂದೇ ಹೊರತು ಸಾಮಾನ್ಯವಾಗಿ "ಸ್ವಾತಂತ್ರ್ಯ" ವೆಂದು ಭಾವಿಸಲ್ಪಡುವ ಸರ್ವ ಸ್ವೇಚ್ಛಾಚಾರವಲ್ಲ.

(ಯ. ಇ. ೧೯೩೧)

## ದುಡಿತವಿಲ್ಲದೇ ಸ್ವಾತಂತ್ರ್ಯವಿಲ್ಲ

"ಭಾರತದ ಸರಕಾರವು ನಮ್ಮ ಕೈಗೆ ಬರಲಿ, ಎಲ್ಲವೂ ಸರಿ ಹೋಗುವುದು" ಎಂದು ಹೇಳುವುದು ಆಗಾಗ ಕೇಳಿಬರು-ತ್ತದೆ. ಇದಕ್ಕಿಂತ ಹೆಚ್ಚಿನ ಮೂಢ ಕಲ್ಪನೆ ಬೇರೊಂದಿಲ್ಲ. ಯಾವ ಜನಾಂಗವೂ ಈ ರೀತಿಯಾಗಿ ಸ್ವಾತಂತ್ರ್ಯವನ್ನು ಪಡೆದಿದ್ದಿಲ್ಲ. ವಸಂತಕಾಲದ ವೈಭವವು ಪ್ರತಿಯೊಂದು ಮರ-

ದಲ್ಲಿಯೂ ಕಂಡುಬಂದಾಗ, ಭೂಮಿಯೆಲ್ಲವೂ ಯೌವನದ ಹೊಸತನದಿಂದ ತುಂಬಿಹೋಗುವುದು. ಹಾಗೆಯೇ, ಸ್ವಾತಂತ್ರ್ಯದ ಚೈತನ್ಯವು ಸಮಾಜದಲ್ಲಿ ತುಂಬಿದಾಗ, ಆಕಸ್ಮಿಕವಾಗಿ ಬಂದ ಅತಿಥಿಗಳು ನಮ್ಮ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಚೈತನ್ಯವನ್ನು ಕಾಣುತ್ತಾರೆ. ನಮ್ಮ ಬಹುಮುಖವಾದ ಸಾರ್ವಜನಿಕ ಕಾರ್ಯಗಳಲ್ಲೆಲ್ಲ ರಾಷ್ಟ್ರಸೇವಕರು ತಮ್ಮ ಶಕ್ತಿಗನುಗುಣವಾಗಿ ದುಡಿಯುವುದನ್ನು ಕಾಣುತ್ತಾರೆ.

(ಗಾಂಧೀಜಿಯ ಬರೆಹ-ಭಾಷಣಗಳು)

## ಸ್ವಾತಂತ್ರ್ಯ ಒಂದು ದೇಣಿಗೆಯಲ್ಲ

ಸ್ವಾತಂತ್ರ್ಯವನ್ನು ದೇವರು ಕೂಡಾ ನಮಗೆ ಕೊಡಲಾರನು–ಎಂದು ಹೇಳಲಿಕ್ಕೂ ನಾನು ಹಿಂದೆಗೆಯೆನು. ಅದನ್ನು ನಾವೇ ಸಂಪಾದಿಸಿಕೊಳ್ಳತಕ್ಕದ್ದು. ಸ್ವಭಾವತಃ ಸ್ವಾತಂತ್ರ್ಯವೆಂಬುದು ಯಾರಿಂದಲಾದರೂ ಕೊಡಲ್ಪಡುವ ವಸ್ತುವಲ್ಲ.

(ಯ. ಇ. ೧೯-೨೧)

— — —

## ಮರಣ ಭೀತರಿಗೆ ಸ್ವಾತಂತ್ರ್ಯವಿಲ್ಲ

ಸ್ವಾತಂತ್ರ್ಯವೆಂದರೆ ಮರಣ ಭಯವನ್ನು ತ್ಯಜಿಸುವುದು. ಮರಣಕ್ಕಂಜಿ ನಡೆದುಕೊಳ್ಳುವ ಜನಾಂಗವು ಸ್ವಾತಂತ್ರ್ಯವನ್ನು ಪಡೆಯಲಾರದು. ಹಾಗೂ, ಪಡೆದರೂ ಅದನ್ನು ಇಟ್ಟುಕೊಳ್ಳಲಾರದು.

(ಯ. ಇ. ೧೯೨೧)

## ಸ್ವಾರ್ಥತ್ಯಾಗವೆ ಸ್ವಾತಂತ್ರ್ಯದ ಸೋಪಾನ

ಸ್ವಾತಂತ್ರ್ಯವೆಂದರೆ ಪರರ ಹತ್ಯದಿಂದ ಪಡೆಯುವ ಸ್ವಾತಂತ್ರ್ಯವಲ್ಲ; ಸ್ವೇಚ್ಛೆಯಿಂದ ಮಾಡುತ್ತಹೋಗುವ ಸ್ವಾರ್ಥತ್ಯಾಗದಿಂದಲೇ ಅದು ಬರುತ್ತದೆ. ರಕ್ತಪಾತದಿಂದ ಅಧಿಕಾರಗಳನ್ನು ಕಸಿದುಕೊಳ್ಳುವುದೂ ಸ್ವಾತಂತ್ರ್ಯವಲ್ಲ; ಕರ್ತವ್ಯವನ್ನು ನಿಸ್ಪೃಹತೆಯಿಂದಲೂ ದಕ್ಷತೆಯಿಂದಲೂ ದುಡಿದಾಗ ಹುಟ್ಟುವ ನೈಸರ್ಗಿಕವಾದ ಸುಂದರ ಫಲವೇ ಸ್ವಾತಂತ್ರ್ಯ. ಸ್ವಾತಂತ್ರ್ಯವೆಂದರೆ ಚೈತನ್ಯ[1] ಪ್ರಭುವಿನ ರಭಸವೇ ಹೊರತು ನಿರೋನು[2] ಹುಟ್ಟಿಸುವ ಗದ್ದಲವಲ್ಲ... ಎಷ್ಟೋ ವೇಳೆ ಅದು ಕ್ಷಿತಿಜವು ತೀರ

---

1 ಬಂಗಾಲದ ಚೈತನ್ಯ ಪಂಥದ ಸ್ಥಾಪಕರು.

2 ರೋಮು ಸಾಮ್ರಾಜ್ಯದ ಕ್ರೂರ ಚಕ್ರವರ್ತಿಯೊಬ್ಬ.

ಕಷ್ಟಾದಾಗ ಉದಿಸಿಬರುತ್ತದೆ. ಆದರೆ ಇಷ್ಟೊಂದು ನನಗೆ ಸ್ಪಷ್ಟವಾಗಿ ಗೊತ್ತಿದೆ— ದೇಶೋದ್ಧಾರದ ಕೆಲಸವನ್ನೇ ಕೆಲಸ-ವಾಗಿ ಕೈಕೊಂಡು ದುಡಿಯುವ ನಿಷ್ಠಾವಂತ ಸ್ತ್ರೀಪುರುಷ ಕಾರ್ಯ-ಕರ್ತರ ತಂಡವು ಸುಸಂಘಟಿತವಾದಾಗಲೇ ಆದು ಸ್ವಾತಂ-ತ್ರ್ಯವು ಉದಿಸುತ್ತದೆ.

(ಯ. ಇ. ೧೯೩೬)

# ನಿಸ್ವಾರ್ಥ ಸೇವಕರಿಂದಲೇ ಸ್ವಾತಂತ್ರ್ಯ ಪ್ರಾಪ್ತಿ

ನಿಷ್ಠಾವಂತ ಹಾಗೂ ನಿಸ್ವಾರ್ಥ ದೇಶಸೇವಕರ ಬಹು ದೊಡ್ಡ ಪಥಕವಿಲ್ಲದೇ ಜನತೆಯ ನಿಜವಾದ ಪ್ರಗತಿಯು ಶಕ್ಯ-ವಾಗದು. ಮತ್ತು ಆ ಪ್ರಗತಿಯಾಗದೆ ಸ್ವಾತಂತ್ರ್ಯವೆಂಬುದು ಶಕ್ಯವಾಗದು. ಬಡವರ ಏಳಿಗೆಗಾಗಿ ಸರ್ವಾರ್ಪಣ ಭಾವದಿಂದ ದುಡಿಯುವ ದೇಶಸೇವಕರು ಹೆಚ್ಚಿದಂತೆಲ್ಲ ಸ್ವಾತಂತ್ರ್ಯದತ್ತ ನಮ್ಮ ಪ್ರಗತಿಯೂ ಹೆಚ್ಚುವುದು.

(ಯ. ಇ. ೧೯೩೦)

---

## ನಮ್ಮ ನಾಗರಿಕತೆಯ ಸ್ವಾತಂತ್ರ್ಯ

ಸ್ವಾತಂತ್ರ್ಯವು ನಮ್ಮನ್ನು ಸುಸಂಸ್ಕೃತರನ್ನಾಗಿ ಮತ್ತು ಪರಿಶುದ್ಧರನ್ನಾಗಿ ಮಾಡಿ, ನಮ್ಮ ನಾಗರಿಕತೆಯನ್ನು ಭದ್ರ-ಗೊಳಿಸಲಾರದಾದರೆ, ಆ ಸ್ವಾತಂತ್ರ್ಯಕ್ಕೇನು ಬೆಲೆ? ನಾವು ನಮ್ಮ ಖಾಸಗಿ ಮತ್ತು ಸಾರ್ವಜನಿಕ ವ್ಯವಹಾರಗಳಲ್ಲೆಲ್ಲ ನೈತಿಕಾಚರಣೆಗೇ ಪ್ರಧಾನಸ್ಥಾನ ಕೊಡುತ್ತ ಬಂದಿರುವುದೇ ನಮ್ಮ ನಾಗರಿಕತೆಯ ಸಾರ ಸರ್ವಸ್ವವಾಗಿದೆ.

(ಯ. ಇ. ೧೯೩೦)

## ಸ್ವಾತಂತ್ರ್ಯ ಜನತೆಯ ಸೊತ್ತು

ನಾನು ಕನಸು ಕಾಣುತ್ತಿರುವ ಸ್ವಾತಂತ್ರ್ಯದಲ್ಲಿ ಜಾತಿ-ಧರ್ಮಗಳ ಭಿನ್ನತೆಗೆಡೆ ಇಲ್ಲ. ಅಥವಾ ಅದು ವಿದ್ಯಾವಂತರ ಅಥವಾ ಹಣವಂತರ ಗುತ್ತಿಗೆಯ ಸೊತ್ತಲ್ಲ. ಸ್ವಾತಂತ್ರ್ಯವು ಅವರೆಲ್ಲರ ಸ್ವತ್ತಾಗಿರುವಂತೆ, ವಿಶೇಷವಾಗಿ ಅಂಗವಿಕಲರ, ಕುರುಡರ ಮತ್ತು ಉಪವಾಸ ಬಿದ್ದು ದುಡಿಯುತ್ತಿರುವ ಜನ-ಕೋಟಿಯ ಸ್ವತ್ತಾಗಿರುತ್ತದೆ.

(ಯ. ಇ. ೧೯೩೧)

---

## ಸ್ವಾತಂತ್ರ್ಯವೆಂದರೆ ಬುಡದಿಂದ ಕಟ್ಟುವ ಕಟ್ಟಡ

ಸತ್ಯ ಮತ್ತು ಅಹಿಂಸೆಯಿಂದಲೇ ನಾವು ಸ್ವಾತಂತ್ರ್ಯವನ್ನು ಪಡೆಯಲಿಚ್ಛಿಸುವುದಾದರೆ, ನಾವಕಾಶವಾಗಿ ಮತ್ತು ಅವಿರತವಾಗಿ ಜನಾಂಗದ ತೀರ ಕೆಳಹಂತದಿಂದಲೇ ವಿಧಾಯಕ ಕಾರ್ಯವನ್ನು ಮಾಡುತ್ತ ಬರಬೇಕಾಗುವುದು. ಹೀಗೆ ಮಾಡುವುದರಿಂದ, ಈಗಿನ ಸರಕಾರವನ್ನು ಕಿತ್ತೆಸೆಯುವ ಸರ್ವಾಧಿಕಾರಿಯು ಹುಟ್ಟಿ, ಆತನು ಬಲಾತ್ಕಾರದಿಂದ ಶಾಂತಿ ಸುವ್ಯವಸ್ಥೆಯನ್ನು ಸ್ಥಾಪಿಸುವುದಕ್ಕೆ ಅವಕಾಶ ದೊರೆಯುವುದಿಲ್ಲ.

(ಯ. ಇ. ೧೯೩೧)

## ನ್ಯಾಯದ ಆಳಿಕೆಯೇ ಸ್ವಾತಂತ್ರ್ಯ

ಭಾರತದ ಸ್ವಾತಂತ್ರ್ಯವೆಂದರೆ ಬಹುಸಂಖ್ಯಾತ ಸಮಾಜದ ಅಂದರೆ ಹಿಂದೂಗಳ ಆಳಿಕೆ ಎಂದು ಹೇಳಲ್ಪಡುತ್ತಿದೆ. ಇದಕ್ಕಿಂತ ದೊಡ್ಡ ತಪ್ಪು ಬೇರಿಲ್ಲ. ಅದು ನಿಜವೆಂದಾದರೆ, ಅಂತಹದನ್ನು ನಾನು ಸ್ವಾತಂತ್ರ್ಯವೆಂದು ಕರೆಯಲಾರೆನು. ಹಾಗೂ ಅದರ ವಿರುದ್ಧವಾಗಿ ನನ್ನ ಸರ್ವಶಕ್ತಿಯಿಂದಲೂ ಹೋರಾಡುವೆನು. ಏಕೆಂದರೆ, ನನ್ನ ಮಟ್ಟಿಗೆ ಭಾರತಸ್ವಾತಂತ್ರ್ಯವೆಂದರೆ

ಎಲ್ಲ ಜನರ ಆಳಿಕೆ, ನ್ಯಾಯವಾದ ಆಳಿಕೆ. ಅಂತಹ ಸ್ವತಂತ್ರ ಭಾರತದಲ್ಲಿ ಮಂತ್ರಿ ಮಂಡಳವಾಗಲೀ ಶಾಸನ ಸಭೆಗಳಾಗಲೀ ಹಿಂದೂ, ಮುಸ್ಲಿಂ, ಸಿಖ್ ಮೊದಲಾದ ಯಾವೊಂದೇ ಜನ-ರಿಂದಲೇ ತುಂಬಿಹೋದರೂ, ಅವರು ಸರ್ವರಿಗೂ ಹಿತವಾಗು-ವಂತೆ ನ್ಯಾಯವಾಗಿ ಆಳಿಕೆ ನಡೆಸಬೇಕಾಗುವುದು.

(ಯ. ಇ. ೧೯೩೧)

# ಜನತೆಯ ಅಧಿಕಾರವೇ ನಿಜವಾದ ಸ್ವಾತಂತ್ರ್ಯ

ಅಲ್ಪಸಂಖ್ಯಾತ ಜಾತಿಗಳು ಬೇಕಾದಷ್ಟನ್ನು ತೆಗೆದು-ಕೊಳ್ಳಲು ಹಿಂದೂಗಳು ಸಮ್ಮತಿಸುವುದೊಂದೇ ಅಹಿಂಸಾತ್ಮಕ-ವಾದ ಉಪಾಯವಾಗಿದೆ. ಅಲ್ಪಸಂಖ್ಯಾತರೇ ಆಳಲು ನನ್ನ ಆಕ್ಷೇಪವೇನೂ ಇಲ್ಲ. ಇದು ನನ್ನ ಕಲಿಕೆಯ ನಂಬಿಕೆಯಲ್ಲ. ಈ ಪರಿಹಾರದಲ್ಲಿ ಯಾವ ಅಪಾಯವೂ ಇಲ್ಲ. ಏಕೆಂದರೆ, ಸ್ವತಂತ್ರ ಸರಕಾರದಲ್ಲಿ ನಿಜವಾದ ಅಧಿಕಾರವು ಜನತೆಯ ಕೈಯಲ್ಲಿಯೇ ಇರುವುದು.

(ಯ. ಇ. ೧೯೩೯)

---

# ಸ್ವಾತಂತ್ರ್ಯಕ್ಕೆ ಸ್ವದೇಶೀ-ವಿದೇಶಿ ಭೇದವಿಲ್ಲ

ಭಾರತವನ್ನು ಎಲ್ಲ ಬಗೆಯ ಬಂಧನದಿಂದಲೂ ಹಂಗಿನಿಂದಲೂ ಬಿಡುಗಡೆಮಾಡಿ, ಇಚ್ಛೆಕಂಡಲ್ಲಿ, ತಪ್ಪುಮಾಡಲಿಕ್ಕೂ ಕೂಡಾ ನಿರ್ಬಂಧವಿಲ್ಲದಂತಹ ರಾಜ್ಯಘಟನೆಗಾಗಿ ನಾವು ಶ್ರಮಿಸುತ್ತೇನೆ. ಅತ್ಯಂತ ದರಿದ್ರನಾದವನೂ ಕೂಡಾ "ಇದು ನನ್ನದೇಶ, ಇದರ ಏಳಿಗೆಯಲ್ಲಿ ನನ್ನ ಮಾತಿಗೂ ಬೆಲೆ ಇದೆ" ಎಂದು ಹೇಳುವಂತಹ ಭಾರತಕ್ಕಾಗಿ ನಾನು ಶ್ರಮಿಸುತ್ತೇನೆ. ಮೇಲಿನ ವರ್ಗ ಕೆಳಗಿನ ವರ್ಗ ಎಂಬ ಭೇದವಿಲ್ಲದೆ, ಎಲ್ಲ ಜಾತಿಯವರೂ ಕೂಡಿ ಬಾಳುವಂತಹ ಸ್ವತಂತ್ರ ಭಾರತಕ್ಕಾಗಿ ನಾನು ಶ್ರಮಿಸುತ್ತೇನೆ. ಅಂತಹ ಭಾರತದಲ್ಲಿ ಅಸ್ಪೃಶ್ಯತೆಯ ಶಾಪಕ್ಕೆ ಎಡೆ ಇರಲಾಗದು. ಹಾಗೆಯೇ ಮದ್ಯವೇ ಮೊದಲಾದ ಮಾದಕ ಪದಾರ್ಥಗಳಿಗೂ ಎಡೆ ಇರಲಾಗದು. ಸ್ತ್ರೀಯರು ಪುರುಷರಿಗಿರುವ ಹಕ್ಕುಗಳನ್ನು ಪಡೆಯುವರು. ಬೇರೆ ಯಾರ ಶೋಷಣೆಗೂ ಹೋಗದೆ, ನಮ್ಮನ್ನು ಯಾರ ಶೋಷಣೆಗೂ ಒಳಗುಮಾಡದೆ ಬಾಳುವುದರಿಂದ, ಮತ್ತು ಸಕಲ ಜಗತ್ತಿನೊಡನೆಯೂ ನಾವು ಸ್ನೇಹದಿಂದಿರುವುದರಿಂದ, ನಮಗೆ ಅತ್ಯಂತ ಚಿಕ್ಕದಾದ ಸೈನ್ಯ ಸಾಕಾಗುವುದು ಮೂಕ ಜನಕೋಟಿಯ ಹಿತಕ್ಕೆ ಅಡ್ಡಬಾರದ ಎಲ್ಲ ಹಕ್ಕು ಬಾಧ್ಯತೆಗಳು— ಅವು

ಹೊರಗಿನವರದ್ದಿರಲಿ ಒಳಗಿನವರದ್ದಿರಲಿ—ಜಾಗರೂಕತೆಯಿಂದ ರಕ್ಷಿಸಲ್ಪಡುವವು. ವೈಯಕ್ತಿಕವಾಗಿ ನನಗೆ ಸ್ವದೇಶೀ ವಿದೇಶೀ ಎಂಬ ಭಿನ್ನಭೇದವು ತೋರುವುದಿಲ್ಲ. ಇದೇ ನನ್ನ ಕನಸಿನ ಸ್ವತಂತ್ರ ಭಾರತ....ಇದರ ಹೊರತು ಬೇರಾವುದರಿಂದಲೂ ನನಗೆ ತೃಪ್ತಿಯಾಗದು.

(ಯ. ಇ. ೧೯೩೧)

## ಲೋಕಕ್ಕೊಂದು ಆದರ್ಶ ಸ್ವಾತಂತ್ರ್ಯ

ಹಿಂಸಾತ್ಮಕ ಮಾರ್ಗದಿಂದಲ್ಲದೆ ನನ್ನ ದೇಶಕ್ಕೆ ಸ್ವಾತಂತ್ರ್ಯವು ಲಭಿಸಲಿಲ್ಲವಾದರೆ, ಅದು ಸಿಗುವವರೆಗೂ ಕಾಯಲು ನಾನು ಸಿದ್ಧನಾಗಿದ್ದೇನೆ. ರಕ್ತಪಾತದಿಂದ ಜಗತ್ತು ಜಿಗುಪ್ಸೆಗೊಂಡಿದೆಂದು ಸತತ ಮೂವತ್ತೈದು ವರ್ಷಗಳ ರಾಜಕೀಯ ಅನುಭವದಿಂದ ನನ್ನ ಅಂತರಂಗಕ್ಕೆ ಅರಿಕೆಯಾಗಿಬಿಟ್ಟಿದೆ. ಜಗತ್ತು ರಕ್ತಪಾತದ ದಾರಿಯಿಂದ ಬಿಡುಗಡೆಯಾಗಲು ಹಾದಿ ಹುಡುಕುತ್ತಿದೆ. ಶಾಂತಿಗಾಗಿ ಹಸಿದಿರುವ ಜಗತ್ತಿಗೆ ಆ ದಾರಿಯನ್ನು ತೋರುವ ಭಾಗ್ಯವು ಪುರಾತನವಾದ ನನ್ನ ಭಾರತ ದೇಶದ್ದಾಗುವುದೆಂದು ನಾನು ಆನಂದ ಪಡುತ್ತಿದ್ದೇನೆ....ಆದ್ದರಿಂದ ಜಗತ್ತಿನ ಸಕಲ ಪ್ರಬಲ ಜನಾಂಗಗಳೂ ಭಾರತದ ಸ್ವಾತಂತ್ರ್ಯಾಂದೋಲನಕ್ಕೆ ಹೃತ್ಪೂರ್ವಕ ಸಹಕಾರವನ್ನೀಯಬೇಕೆಂದು ಕೇಳಿಕೊಳ್ಳಲು ನನಗೆ ಯಾವ ಸಂಶಯವೂ ಇರುವುದಿಲ್ಲ. ತಮ್ಮ ರಾಷ್ಟ್ರದ ಮಾನ ಗೌರವಗಳ ಸಲುವಾಗಿ ಕೋಟ್ಯಂತರ ಜನರು ಪ್ರತಿಕಾರ ಭಾವನೆ ಇಲ್ಲದೆ, (ಸ್ವಾತಂತ್ರ್ಯಕ್ಕಾಗಿ) ಕಷ್ಟವನ್ನು ಸಹಿಸಿ-

ಕೊಳ್ಳುತ್ತಿರುವ ಈ ದೃಶ್ಯವು ಚಿರಸ್ಮರಣೀಯವಾಗಿ ಕಾದಿಟ್ಟು-ಕೊಳ್ಳುವಂತಹ ಸ್ಥಿತಿಯಂತಿದೆ.

ಭಾರತವು ಸತ್ಯವನ್ನು ಬಿಟ್ಟುಕೊಟ್ಟು ಸ್ವತಂತ್ರವಾಗು-ವುದಕ್ಕಿಂತ, ಸಾಯುವುದೇ ಮೇಲೆಂದು ನಾನು ಭಾವಿಸುತ್ತೇನೆ.

(ಯ. ಇ. ೧೯೩೧)

## ಸರ್ವರಾಷ್ಟ್ರಗಳ ಸ್ವಾತಂತ್ರ್ಯ

ನಾನು ತೀರಿದಮೇಲೆ ಭಾರತವು ಸ್ವತಂತ್ರವಾಗುವುದು, ಮತ್ತು ಭಾರತವೊಂದೇ ಅಲ್ಲದೆ ಇಡೀ ಜಗತ್ತೇ ಸ್ವತಂತ್ರವಾಗು-ವುದು. ಅಮೇರಿಕನ್ನರಾಗಲೀ ಇಂಗ್ಲೀಷರಾಗಲೀ ಸ್ವತಂತ್ರ-ರಾಗಿದ್ದಾರೆಂದು ನಾನು ನಂಬುವದಿಲ್ಲ. ಕಪ್ಪು ಜನಾಂಗಗಳನ್ನು ಗುಲಾಮಗಿರಿಯಲ್ಲಿಟ್ಟುಕೊಳ್ಳುವ ಅಧಿಕಾರವು ಇರುವಲ್ಲಿಯ ವರೆಗೆ ಅವುಗಳು ಸ್ವತಂತ್ರವಾಗಲಾರವು. ನನ್ನ ಧ್ಯೇಯ-ವೇನೆಂಬುದನ್ನೂ, ಸ್ವಾತಂತ್ರ್ಯವೆಂದರೇನೆಂಬುದನ್ನೂ ನಾನು ಬಲ್ಲೆನು. ಆಂಗ್ಲ ಶಿಕ್ಷಕರು ನನಗೆ 'ಸ್ವಾತಂತ್ರ್ಯ'ದ ಅರ್ಥವನ್ನು ಹೇಳಿದ್ದರು. ನಾನು ಅದನ್ನು ಕಂಡಂತೆ ಬಿಡಿಸಿ ಹೇಳಲೇ-ಬೇಕು.

(ಬಾಂಬೆ ಕ್ರಾನಿಕಲ್ ೧೯೪೨)

---

## ಸ್ವಾತಂತ್ರ್ಯ ಸಮರಕ್ಕೆ ಆತ್ಮ ಬಲಿದಾನ

ಬಲಿದಾನವಿಲ್ಲದೆ ಸ್ವಾತಂತ್ರ್ಯ ಸಮರದಲ್ಲಿ ಭಾಗವಹಿಸಲು ಬರುವುದಿಲ್ಲ. ಮನುಷ್ಯನು ಹೇಗೆ ತನ್ನ ದೇಹವನ್ನು ಬಿಟ್ಟು ಅನ್ಯರ ದೇಹದಲ್ಲಿ ಇರಲಾಗುವುದಿಲ್ಲವೆಂದು ತಿಳಿಯುತ್ತಾನೋ ಹಾಗೆಯೇ ಒಂದು ಜನಾಂಗವು ಮತ್ತೊಂದು ಜನಾಂಗದ–ಅದು ಎಷ್ಟೇ ಶ್ರೇಷ್ಠವಾದದ್ದಿರಲಿ, ಉದಾತ್ತವಾದದ್ದಿರಲಿ— ಅಡಿಯಾಳಾಗಿರಲು ಸರ್ವಥಾ ಬಯಸುವುದಿಲ್ಲ. ತಮ್ಮ ಸ್ವಾತಂತ್ರ್ಯವನ್ನುಳಿಸಿಕೊಳ್ಳಲಿಕ್ಕಾಗಿ ಅಪಾರವಾದ ತ್ಯಾಗವನ್ನನುಭವಿಸುತ್ತಿರುವ ಆಂಗ್ಲ ಜನರು ಭಾರತದ ದುಃಖಾನುತಾಪವನ್ನರಿಯಲು ಹಿಂದಾಗಬಾರದು.

(ಹ. ೧೯೪೦)

---

## ಭಾರತ ಸ್ವಾತಂತ್ರ್ಯದಿಂದ ಮಾನವ ಬಂಧುಭಾವ

ನನ್ನ ಜೀವಿತಕಾರ್ಯವು ಭಾರತ ಸ್ವಾತಂತ್ರ್ಯ ಪ್ರಾಪ್ತಿಯೊಂದೇ ಅಲ್ಲ. ಭಾರತದ ಸ್ವಾತಂತ್ರ್ಯದ ಮೂಲಕವಾಗಿ ಮಾನವಲೋಕದಲ್ಲಿ ಭ್ರಾತೃತ್ವ ಸ್ಥಾಪಿಸುವುದೇ ನನ್ನ ಉದ್ದೇಶವಾಗಿದೆ. ನನ್ನ ದೇಶಾಭಿಮಾನವು ಸಂಕುಚಿತವಾದದ್ದಲ್ಲ; ಅದು

ಸರ್ವ ದೇಶಗಳನ್ನೂ ಆವರಿಸಿಕೊಳ್ಳುವಂತಹದು. ಅನ್ಯ ದೇಶಗಳ ದುಃಖದುಮ್ಮಾನಗಳನ್ನು ಕಂಡು ಸಹಿಸುವ ದೇಶಭಕ್ತಿಯು ನನ್ನದಲ್ಲ. ನನ್ನ ಕಲ್ಪನೆಯ ದೇಶಭಕ್ತಿಯು ಮಾನವಲೋಕದ ಹಿತಕ್ಕೆ ಯಾವಾಗಲೂ ಅವಿರೋಧವಾಗಿರುವುದು. ನನ್ನ ದೇಶಭಕ್ತಿಯೂ, ಅದನ್ನು ಹುಟ್ಟಿಸಿದ ನನ್ನ ಧರ್ಮವೂ ಸಕಲ ಜೀವಿಗಳನ್ನೂ ತನ್ನದೆಂದು ತಬ್ಬಿಕೊಳ್ಳುತ್ತದೆ.

(ಯ. ಇ. ೧೯-೩-೨೫)

---

## ಕೈನೂಲಿನಿಂದಲೇ ರಾಷ್ಟ್ರಸ್ವಾತಂತ್ರ್ಯ

ಭಾರತವನ್ನು ಸ್ವತಂತ್ರಗೊಳಿಸಬಹುದು ಹಾಗೂ ಆ ಸ್ವಾತಂತ್ರ್ಯವನ್ನು ಅಹಿಂಸಾತ್ಮಕವಾಗಿಯೇ ಕಾದುಕೊಂಡು ಬರಬಹುದು ಎಂದು ನಂಬುವವರು ಇಡೀ ಜನಾಂಗವನ್ನು ಅಹಿಂಸಾತ್ಮಕವಾಗಿರುವಂತೆ ಮಾಡಬೇಕಾಗುವುದು. ಹಾಗೆ ಮಾಡಬೇಕಾದರೆ, ಇಡೀ ಜನಾಂಗವು ದೇಶದ ಸಲುವಾಗಿ ಅಹಿಂಸಾತ್ಮಕವಾದ ವಿಧಾಯಕ ಕಾರ್ಯದಲ್ಲಿ ತೊಡಗಬೇಕಾಗುವುದು. ಭಂಡವಳದ ಅಗತ್ಯವಿಲ್ಲದೆ ಎಲ್ಲರೂ ಕೈಕೊಳ್ಳಬಹುದಾದ, ಹಾಗೂ ಅದರಿಂದ ನರನಾಡಿಗಳನ್ನು ಸುಖಶಾಂತಿಯಿಂದಿಡಬಲ್ಲ, ಉದ್ಯೋಗವಾದರೂ ಯಾವುದು? ಅದು ನೂಲುವುದು. ಮತ್ತು ಅದಕ್ಕೆ ಪೂರ್ವಭಾವಿಯಾದ ಇತರ ಕೆಲಸಗಳು— ಎಂಬುದೊಂದೇ ಅದಕ್ಕೆ ಉತ್ತರವಾಗಿದೆ. ಈ ಉದ್ಯೋಗವು ದೇಶಕ್ಕೆ ರಕ್ತಗತವಾಗಿಯೇ ಬಂದಿದೆ. ಅದು ಈ ನೆಲದ ಸ್ವಾಭಾ-

ವಿಕ ಗುಣವಾಗಿಬಿಟ್ಟಿದೆ ಲಕ್ಷಾಂತರ ಜನರು ಅದನ್ನು ಸುಲಭ-ವಾಗಿ ಕಲಿತುಕೊಳ್ಳಬಹುದಷ್ಟೇ ಅಲ್ಲದೆ ಅದಕ್ಕೆ ಯಾವಾಗಲೂ ಬೆಲೆ ಇದ್ದೇ ಇವೆ. ಗಿರಣಿಗಳು ಇಲ್ಲದಿರುತ್ತಿದ್ದರೆ ಕೈನೂಲಿಗೆ ತುಪ್ಪದ ಕಿಮ್ಮತ್ತು ಬರುತ್ತಿದ್ದಿತು. ನೂಲಿನ ಬರಗಾಲವು ಆಹಾರಧಾನ್ಯಗಳ ಬರಗಾಲದಷ್ಟೇ ಮಹತ್ವದ್ದಾಗುತ್ತಿದ್ದಿತು. ಜನತೆಗೆ ಮನಸ್ಸಿದ್ದರೆ, ತನ್ನ ಬಟ್ಟೆಯನ್ನು ತಾನೇ ವಿಶೇಷ ಶ್ರಮ-ವಿಲ್ಲದೆ ಮಾಡಿಕೊಳ್ಳಬಲ್ಲುದು.

(ಹ. ೧೯೩೯)

# ಸ್ವಾತಂತ್ರ್ಯವು ರಕ್ತಪಾತದ ದಾರಿಯಲ್ಲ

ಭಾರತದ ಸ್ವಾತಂತ್ರ್ಯವು ಪಾಶ್ಚಿಮಾತ್ಯರು ಅನುಸರಿಸು-ತ್ತಿರುವ ರಕ್ತಪಾತದ ದಾರಿಯಲ್ಲಿಲ್ಲ. ಪಾಶ್ಚಿಮಾತ್ಯರು ರಕ್ತ-ಪಾತದ ಮಾರ್ಗದಿಂದ ಬೇಸತ್ತುಹೋಗಿರುವ ಚಿಹ್ನಗಳು ಕಂಡು-ಬರುತ್ತಿವೆ. ಭಾರತದ ದಾರಿಯು ದೈವಭಕ್ತಿಯುತವಾದ ಸಾದಾ ಜೀವನದ, ಅಹಿಂಸಾತ್ಮಕವಾದ ಶಾಂತಿ ಮಾರ್ಗವಾಗಿದೆ. ಆದರೆ, ಈಗ ಭಾರತವು ತನ್ನ ಆತ್ಮವನ್ನೇ ಕಳೆದುಕೊಳ್ಳುವ ಅಪಾಯವು ಕಂಡುಬರುತ್ತಿದೆ. ಆ ಆತ್ಮವನ್ನು ಕಳೆದುಕೊಂಡು ಭಾರತವು ಜೀವಿಸಲಾರದು.

ಭಾರತವನ್ನು ಇಂಗ್ಲೆಂಡ್ ಅಥವಾ ಅಮೇರಿಕದಂತೆ ಮಾಡುವುದೆಂದರೆ, ಭಾರತವು ಇತರ ಜನಾಂಗಗಳ ಶೋಷಣೆ-

ಮಾಡಲು ತೊಡಗುವಂತೆಯೇ ಸರಿ. ಇದುವರೆಗೆ ಪಾಶ್ಚಿಮಾತ್ಯ ರಾಷ್ಟ್ರಗಳೆಲ್ಲವೂ ಯುರೋಪಿನ ಹೊರಗಿನ ಜನಾಂಗಗಳನ್ನೆಲ್ಲ ತಮ್ಮ ಶೋಷಣಕಾರ್ಯಕ್ಕಾಗಿ ಹಂಚಿಕೊಂಡಿದ್ದು, ಶೋಷಣೆ-ಮಾಡಬಲ್ಲ ಹೊಸ ಜಾಗವೊಂದೂ ಉಳಿಯದಂತೆ ಮಾಡಿವೆ. ಅವರ ಶೋಷಣೆಗೆ ಒಳಗಾದ ದೇಶಗಳಲ್ಲಿ ಭಾರತವು ಅತ್ಯಂತ ದೊಡ್ಡ ಬಲಿಯಾಗಿದೆ. ಜಪಾನವೂ ಇದರಲ್ಲಿ ತನ್ನ ಪಾಲನ್ನೂ ಪಡೆದಿದೆ. ಆದರೆ, ಭಾರತ ಮತ್ತು ಚೀನಾದೇಶಗಳು ಶೋಷಿಸ-ಲ್ಪಡಲು ನಿರಾಕರಿಸಿದರೆ, ಶೋಷಕರ ಗತಿ ಏನಾಗುವುದು? ಚೀನಾ-ಭಾರತಗಳು ಶೋಷಣೆಯನ್ನು ತಪ್ಪಿಸಿಕೊಂಡರೆ, ಪಾಶ್ಚಿ-ಮಾತ್ಯ ರಾಷ್ಟ್ರಗಳು ಮತ್ತು ಜಪಾನವು ದುರ್ಗತಿಗೆ ಬರುವವು. ಅಂದಮೇಲೆ, ಪಾಶ್ಚಿಮಾತ್ಯ ರಾಷ್ಟ್ರಗಳನ್ನು ಅನುಕರಿಸಬಯಸುವ ಭಾರತದ ಗತಿ ಏನಾದೀತು ?

(ಯ. ಇ. ೧೯೨೬)

## ಒಕ್ಕಲಿಗನ ಸ್ವಾತಂತ್ರ್ಯವೇ ರಾಷ್ಟ್ರಸ್ವಾತಂತ್ರ್ಯ

ಹಿಟ್ಲರರು ಅಧಿಕಾರಕ್ಕೆ ಬರುವುದು ನನಗೆ ಬೇಕಾಗಿಲ್ಲ. ಸ್ವತಂತ್ರನಾದ ಒಕ್ಕಲಿಗನು ಅಧಿಕಾರಕ್ಕೆ ಬರುವುದು ನನಗೆ ಬೇಕಾಗಿದೆ. ಇಷ್ಟೆಲ್ಲ ವರ್ಷವೂ ನಾನು ಒಕ್ಕಲಿಗರೊಂದಿಗೆ ಸಮರಸನಾಗಲು ಪ್ರಯತ್ನಿಸುತ್ತ ಬಂದಿರುವೆನಾದರೂ ಇನ್ನೂ ನನ್ನ ಪ್ರಯತ್ನದಲ್ಲಿ ಜಯಸಿಕ್ಕಿರುವುದಿಲ್ಲ. ನನಗೂ ಒಕ್ಕಲಿ-ಗನಿಗೂ ಇರುವ ಭೇದವಿಷ್ಟೇ— ಆತನು ಬೇರೆ ಉಪಾಯತೋರದೆ

ಒಕ್ಕಲಿಗನಾಗಿ, ದುಡಿಮೆಗಾರನಾಗಿದ್ದಾನೆ. ನಾನು ಮಾತ್ರ ಸ್ವೇಚ್ಛೆಯಿಂದಲೇ, ಬೇಕೆಂತಲೇ, ಒಕ್ಕಲಿಗನೂ ದುಡಿಮೆಗಾರನೂ ಆಗಲಿಚ್ಛಿಸಿದ್ದೇನೆ. ಆತನು ಯಾವಾಗ ಸ್ವಸಂತೋಷದಿಂದ, ತಾನಾಗಿಯೇ, ಒಕ್ಕಲಿಗನೂ ದುಡಿಮೆಗಾರನೂ ಆಗಲಿಚ್ಛಿಸು-ವಂತಾಗುವನೋ ಆಗಲೇ ಅವನನ್ನು ಎಲ್ಲ ಬಂಧನಗಳಿಂದಲೂ ಬಿಡಿಸಿ ಸ್ವತಂತ್ರನಾಗುವಂತೆ ನಾನು ಮಾಡಬಲ್ಲೆನು.

(ಹ ೧೯೪೭)

## ನೈತಿಕ ಪ್ರಗತಿಯ ಆವಶ್ಯಕತೆ

ನನಗೆ ಬೆಳವಣಿಗೆ ಬೇಕು, ಸ್ವಯಂನಿರ್ಣಯಾಧಿಕಾರ ಬೇಕು, ಸ್ವಾತಂತ್ರ್ಯವೂ ಬೇಕು— ಆದರೆ ಇವೆಲ್ಲವೂ ನನ್ನ ಆತ್ಮಕ್ಕೆ ಬೇಕು. ಈಗಿನ ಯಂತ್ರೋಪಕರಣದ ಯುಗವು ಪ್ರಾಚೀನ ಕಾಲದ ಶಿಲಾಯುಗಕ್ಕಿಂತ ಉತ್ತಮವಾಗಿದೆಯೆಂಬ ಬಗೆಗೆ ನನಗೆ ಸಂದೇಹವುಂಟಾಗುತ್ತದೆ. ಭೌತಿಕ ಅಭಿವೃದ್ಧಿಯ ವಿಷಯದಲ್ಲಿ ನನಗೆ ಆಸಕ್ತಿ ಇಲ್ಲ. ನೈತಿಕ ವಿಕಾಸಕ್ಕಾಗಿಯೇ ನಾವು ನಮ್ಮ ಬುದ್ಧಿಶಕ್ತಿಯನ್ನೂ ಕೌಶಲ್ಯವನ್ನೂ ಉಪಯೋ-ಗಿಸಬೇಕು.

(ಯ. ಇ. ೧೯೨೧)

---

## ಬಂಧನವು ಬಂಧನವೇ ?

ಸ್ವಾಭಿಮಾನಿಯಾದ ಮನುಷ್ಯನಿಗೆ ಬಂಗಾರದ ಸರಪಣಿಯ ಬಂಧನವು ಕಬ್ಬಿಣದ ಸರಪಣಿಯ ಬಂಧನದಷ್ಟೇ ಅಪಮಾನಕರವಾಗುವದು. ಅಪಮಾನವು ಬಂಧನವಲ್ಲಿದೆಯೇ ಹೊರತು, ಸರಪಣಿಯ ಲೋಹದಲ್ಲಿಲ್ಲ.

(ಯ. ಇ. ೧೯-೨೯)

---

## ರಾಷ್ಟ್ರಸ್ವಾತಂತ್ರ್ಯ-ವ್ಯಕ್ತಿಸ್ವಾತಂತ್ರ್ಯ

ರಾಷ್ಟ್ರಸ್ವಾತಂತ್ರ್ಯವೆಂಬುದು ಕಟ್ಟುಕತೆಯಲ್ಲ. ವೈಯಕ್ತಿಕ ಸ್ವಾತಂತ್ರದಷ್ಟೇ ರಾಷ್ಟ್ರಸ್ವಾತಂತ್ರ್ಯವೂ ಅವಶ್ಯದ್ದಾಗಿದೆ. ಆವೆರಡೂ ಅಹಿಂಸಾ ಮಾರ್ಗದಿಂದ ಪಡೆದದ್ದಾದರೆ, ಅನ್ಯವ್ಯಕ್ತಿಯ ಅಥವಾ ಅನ್ಯರಾಷ್ಟ್ರದ ಸ್ವಾತಂತ್ರ್ಯಕ್ಕೆ ಹಾನಿಕರವಾಗಲಾರವು. ಇದರಂತೆಯೇ ಅಂತರರಾಷ್ಟ್ರೀಯ ಸ್ವಾತಂತ್ರ್ಯಕ್ಕೂ ಹಾನಿಕರವೆನಿಸದು. "ಅನ್ಯರಿಗೆ ಹಾನಿಯಾಗದಂತೆ ನಿನ್ನ ಸೊತ್ತನ್ನು ಬಳಸು" ಎಂಬುದೇ ನ್ಯಾಯಸಿದ್ಧಾಂತ. ವಿಶ್ವವೆಲ್ಲವೂ ಅಣುವಿನಲ್ಲಡಗಿದೆ ಎಂಬೊಂದು ಸದುಕ್ತಿ ಇದೆ. ಅಂದಮೇಲೆ, ಅಣುವಿಗೊಂದು ನ್ಯಾಯ, ವಿಶ್ವಕ್ಕೆ ಮತ್ತೊಂದು ನ್ಯಾಯ ಎಂಬುದೆಲ್ಲಿಂದ ಬಂತು ?

(ಯ. ಇ. ೧೯೩೭)

---

# ಸತ್ಯವೇ ಮುತ್ಸದ್ದಿತನ

ನಾನೊಬ್ಬ ಸಂತನ ಸೋಗಿನಲ್ಲಿರುವ ರಾಜಕಾರಣಿಯಲ್ಲ. ಸತ್ಯವು ಅತ್ಯಂತ ಉನ್ನತ ಬುದ್ಧಿಮತ್ತೆಯಾಗಿರುವುದರಿಂದ, ಕೆಲವೊಮ್ಮೆ ನನ್ನ ಕೃತಿಗಳು ಶ್ರೇಷ್ಠ ಮುತ್ಸದ್ದಿತನದ ಕೃತಿಗಳಂತೆ ತೋರುತ್ತವಷ್ಟೆ. ಸತ್ಯ ಮತ್ತು ಅಹಿಂಸೆಯ ಹೊರತು ಬೇರಾವ ರಾಜಕೀಯ ತಂತ್ರವೂ ನನ್ನಲ್ಲಿಲ್ಲ. ನನ್ನ ದೇಶದ ಸ್ವಾತಂತ್ರ್ಯ ಪ್ರಾಪ್ತಿಯ ಸಲುವಾಗಿಯಾದರೂ ನಾನು ಸತ್ಯ-ಅಹಿಂಸೆಗಳನ್ನು ತ್ಯಜಿಸಲಾರೆನು. ಯಾಕೆಂದರೆ ಅವುಗಳನ್ನು ಬಿಟ್ಟುಕೊಟ್ಟು ಸ್ವಾತಂತ್ರ್ಯಪ್ರಾಪ್ತಿಮಾಡಿಕೊಳ್ಳಲಿಕ್ಕೆ ಶಕ್ಯವೇ ಇಲ್ಲ.

(ಯ. ಇ. ೧೯-೨-೭)

× × ×

ಸ್ವಾತಂತ್ರ್ಯ ಸಾಧನೆಗೆ ಅಸಹನೆಯಷ್ಟು ಕೆಟ್ಟ ತರಬೇತಿ ಬೇರಿಲ್ಲ. ಸ್ವಾತಂತ್ರ್ಯವೆಂದರೆ, ನಮಗೆ ಸೇರದಿದ್ದರೂ ವಿರುದ್ಧಾಭಿಪ್ರಾಯವನ್ನು ಸಹನೆಯಿಂದ ತಾಳಿಕೊಳ್ಳುವುದು. ನಮ್ಮ ಅಭಿಪ್ರಾಯದ ವಿರುದ್ಧವಾಗಿ ಸರಕಾರವು ನಿರ್ಣಯಿಸುತ್ತದೆ ಎಂದು ದೂರುವ ನಾವೂ ವಿರುದ್ಧಾಭಿಪ್ರಾಯದವರು ಮಾಡುವ ಅದೇ ದೂರಿಗೆ ಅರ್ಹರಾಗುವೆವು.

(ಯ. ಇ. ೧೯೧೯)

---

## ತನ್ನಂತೆ ಪರರಬಗೆವುದೇ ಸ್ವಾತಂತ್ರ್ಯ

ನಾವು ಯಾವ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತೇವೋ ಅದೇ ಸ್ವಾತಂತ್ರ್ಯವನ್ನು ನಾವು ಅನ್ಯರಿಗೂ ಕೊಡಬೇಕು. ಸರಕಾರದ ಗುಲಾಮಗಿರಿಯ ಬದಲು ನಮ್ಮ ಗುಲಾಮಗಿರಿಯನ್ನು ನಾವು ಜನತೆಯ ಮೇಲೆ ಹೇರಬಾರದು.

(ಯ. ಇ. ೧೯೨೦)

---

## ಶಾಂತ ರೀತಿಯ ಕ್ರಾಂತಿ

ಅಹಿಂಸಾ ಮಾರ್ಗದ ಸ್ವಾತಂತ್ರ್ಯವೆಂಬುದು ಶಾಂತ-ರೀತಿಯ ಕ್ರಾಂತಿಯ ಪ್ರಗತಿಯಾಗಿದೆ. ಅದರ ಮೂಲಕವಾಗಿ ಸ್ವಾತಂತ್ರ್ಯ ಪಡೆಯುವುದೆಂಬುದು, ಚೆನ್ನಾಗಿ ಬೆಳೆದ ಮರದಿಂದ ಪಕ್ವವಾಗಿ ಬಿದ್ದ ಹಣ್ಣನ್ನು ತೆಗೆದುಕೊಂಡಂತಾಗುವುದು.

(ಯ. ಇ. ೧೯೨೦)

---

## ತಪಸ್ಸಿನಿಂದಲೇ ಸ್ವಾತಂತ್ರ್ಯ

ತನ್ನ ಮಗುವು ಬದುಕಲೆಂದು ತಾಯಿ ಕಷ್ಟಸಹಿಸುತ್ತಾಳೆ. ಗೋದಿಯ ಬೀಜವು ತಾನು ನತ್ತು ಗಿಡವನ್ನು ಹುಟ್ಟಿಸುತ್ತದೆ. ಸಾವಿನಿಂದ ಬದುಕು ಹುಟ್ಟುತ್ತದೆ. ಹೀಗೆ, ತಪಸ್ಸಿನ ಶುದ್ಧೀಕರಣದ ಸನಾತನ ನೀತಿಯನ್ನು ಭಾರತವು ತ್ಯಜಿಸೀತೆ? ಗುಲಾಮಗಿರಿಯಿಂದಲೇ ಭಾರತದ ಸ್ವಾತಂತ್ರ್ಯವು ಹುಟ್ಟಿ ಬರುವುದು.

× × ×

ಕಷ್ಟಸಹನೆಯೇ ನಮ್ಮ ಪ್ರಗತಿಯ ಅಳತೆ ಗೋಲಾಗಬೇಕು. ತಪಸ್ಸು ಶುದ್ಧವಾದಂತೆಲ್ಲ, ಪ್ರಗತಿಯು ಹೆಚ್ಚಾಗುತ್ತ ಹೋಗುವುದು. ಯೇಸುಕ್ರಿಸ್ತನ ಕಷ್ಟಸಹನೆಯ ತಪಸ್ಸು ಜಗತ್ತನ್ನೇ ಬಂಧನದಿಂದ ಬಿಡುಗಡೆಮಾಡಲಿಲ್ಲವೆ? ಹರಿಶ್ಚಂದ್ರನೂ ಕೂಡ ತನ್ನ ಕಷ್ಟಸಹನೆಯಿಂದಲೇ ಸತ್ಯದ ರಾಜ್ಯವನ್ನು ಪುನಃ ಅಸ್ತಿತ್ವಕ್ಕೆ ತಂದನಲ್ಲವೆ?

(ಯ. ಇ. ೧೯೨೦)

---

# ಅಭಿಪ್ರಾಯ ಸ್ವಾತಂತ್ರ್ಯ

ಸರ್ವಾಧಿಕಾರತ್ವವನ್ನು ನಾನು ತಿರಸ್ಕರಿಸುತ್ತೇನೆ. ನಾನು ನನ್ನ ಹಕ್ಕನ್ನೂ ಸ್ವಾತಂತ್ರ್ಯವನ್ನೂ ಎಷ್ಟೊಂದು ಅಮೂಲ್ಯ-ವಾದುದೆಂದು ತಿಳಿಯುತ್ತೇನೊ ಹಾಗೆಯೇ ಅನ್ಯರೂ ತಮ್ಮ ಹಕ್ಕು ಮತ್ತು ಸ್ವಾತಂತ್ರ್ಯವನ್ನು ಅಮೂಲ್ಯವೆಂದು ತಿಳಿದು-ಕೊಳ್ಳುವುದನ್ನು ನಾನು ಗೌರವಿಸುತ್ತೇನೆ. ಯಾವ ವ್ಯಕ್ತಿಯನ್ನೇ ಆಗಲಿ, ನನ್ನ ಅಭಿಪ್ರಾಯವನ್ನು ಒಪ್ಪಿಕೊಳ್ಳಬೇಕೆಂದು ಒತ್ತಾ-ಯಿಸಿ, ನನ್ನ ಅನುಯಾಯಿಯಾಗಿ ಮಾಡಿಕೊಳ್ಳುವುದಿಲ್ಲ. ಅವರ ಮನಸ್ಸಿಗೆ ಸರಿದೋರಿದರೆ ಮಾತ್ರವೇ ಅವರು ನನ್ನನ್ನು ಸಮರ್ಥಿಸಬಹುದು. ಮನಸ್ಸಿಗೆ ಒಪ್ಪಿಗೆಯಾಗದ ಶಾಸ್ತ್ರವಚನ-ಗಳನ್ನೂ ಕೂಡಾ ತಿರಸ್ಕರಿಸಬಹುದೆಂದು ನನ್ನ ಅಭಿಪ್ರಾಯ-ವಾಗಿದೆ. ಆದರೆ, ನಾನು ಸಮಾಜದಲ್ಲುಳಿದುಕೊಂಡೂ ಸ್ವತಂತ್ರ-ನಾಗಿರಬೇಕಾದರೆ, ಮುಖ್ಯವಾದ ವಿಷಯಗಳ ಬಗೆಗಷ್ಟೇ ನನ್ನ ಸ್ವಾತಂತ್ರ್ಯವನ್ನು ಕಾದುಕೊಂಡು ಬರಬೇಕಾಗುವುದೆಂಬುದನ್ನು ಅನುಭವದಿಂದ ಕಂಡುಕೊಂಡಿದ್ದೇನೆ.

(ಯ. ಇ. ೧೯೨೦)

---

## ಸ್ವಾತಂತ್ರ್ಯದ ಪೂರ್ವಸಿದ್ಧತೆ

ಅಹಿಂಸಾತ್ಮಕ ಸ್ವಾತಂತ್ರ್ಯದ ಪ್ರಾಪ್ತಿಗೆ ಪೂರ್ವಭಾವಿಯಾಗಿ, ಹಿಂಸಾಮನೋಭಾವದ ಜನರನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಅತ್ಯವಶ್ಯವಾಗುವುದು. ಅಂತಹ ಪುಂಡಾಟಿಕೆಯ ಜನರು ಹಿಂಸೆಯಲ್ಲಿ ತೊಡಗದಂತೆ ಅವರ ಪುನಃಪರಿವರ್ತನೆ-ಮಾಡಿದಲ್ಲದೆ, ಅದನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಸಾಧ್ಯ-ವಾಗದು.

(ಯ. ಇ. ೧೯೩೨)

## ವ್ಯಕ್ತಿಸ್ವಾತಂತ್ರ್ಯದ ಮಿತಿ

ವ್ಯಕ್ತಿಸ್ವಾತಂತ್ರ್ಯಕ್ಕೆ ನಾನು ಬೆಲೆಗೊಡುತ್ತೇನೆ. ಆದರೂ ಮನುಷ್ಯನು ಸಾಮಾಜಿಕ ಜೀವಿಯೆಂಬುದನ್ನು ಮರೆಯಬಾರದು. ಸಾಮಾಜಿಕ ಪ್ರಗತಿಗೆ ಅನುಕೂಲವಾಗುವಂತೆ ಆತನು ತನ್ನ ವ್ಯಕ್ತಿತ್ವವನ್ನು ಹೊಂದಿಸಿಕೊಳ್ಳುತ್ತ ಬಂದುದರಿಂದಲೇ ಈಗಿನ ಸ್ಥಾನಕ್ಕೆ ಬಂದಿದ್ದಾನೆ. ಅನಿಯಂತ್ರಿತ ವ್ಯಕ್ತಿಸ್ವಾತಂತ್ರ್ಯ-ವೆಂಬುದು ಕಾಡಿನಲ್ಲಿರುವ ಮೃಗದ ನಾಶವೀ ನೀತಿಯಾಗುವುದು. ಸಾಮಾಜಿಕ ನಿರ್ಬಂಧ ಮತ್ತು ವ್ಯಕ್ತಿಸ್ವಾತಂತ್ರ್ಯಗಳನ್ನು ಹೊಂದಿಸಿಕೊಳ್ಳುವ ಹಾದಿಯನ್ನು ನಾವು ಕಂಡುಹಿಡಿದಿದ್ದೇವೆ.

ಇಡೀ ಸಮಾಜದ ಹಿತಕ್ಕಾಗಿ ಸಮಾಜದ ನಿರ್ಬಂಧಕ್ಕೆ ಸಂತೋಷದಿಂದ ತಲೆಬಗ್ಗುವುದು ವ್ಯಕ್ತಿಯ ಗೌರವವನ್ನೂ ಸಮಾಜದ ಗೌರವವನ್ನೂ ಹೆಚ್ಚಿಸುವುದು.

(ಹ. ೧೯೩೯)

## ಆತ್ಮಬಲಿದಾನದಿಂದಲೇ ಸ್ವಾತಂತ್ರ್ಯ

ಜಗತ್ತಿನ ಜನಾಂಗಗಳ ಸಭೆಯಲ್ಲಿ ನಮಗೂ ಸ್ಥಾನ ದೊರೆತು ನಮ್ಮ ಜಾತಿಗೂ ಗೌರವ ದೊರೆಯುವಂತಾಗಬೇಕಾದರೆ ನಾವು ಕೇವಲ ಒಂದು ಸಾವಿರ ಜನ ನಿರಪರಾಧಿ ಸ್ತ್ರೀಪುರುಷರ ಬಲಿದಾನವನ್ನಷ್ಟೇ ಅಲ್ಲದೆ ಅನೇಕ ಸಾವಿರ ಅಂತಹ ಜನರ ಬಲಿದಾನವನ್ನು ಶಾಂತಚಿತ್ತದಿಂದಲೇ ಸಹಿಸುವಂತಾಗಬೇಕು. ಅಂತಹ ಬಲಿದಾನದಲ್ಲಿ ಜಗತ್ತಿನ ಎಲ್ಲ ಜನಾಂಗಗಳನ್ನೂ ನಾವು ಮೀರಿಸುವಂತಾಗಬೇಕು.

(ಯ. ಇ. ೧೯೨೦)

## ಸ್ವಾತಂತ್ರ್ಯಕ್ಕಾಗಿ ಕರನಿರಾಕರಣ

ಜನತೆಯನ್ನು ಜಾಗ್ರತಗೊಳಿಸುವುದರಲ್ಲಿ ನಾವು ಮೊದಲಿನಿಂದಲೂ ತೊಡಗಿಕೊಂಡಿದ್ದೇವೆ. ಅವರೇ ನಮ್ಮ ಮುಖ್ಯ ಬೆಂಬಲವಾಗಬೇಕು. ಏಕೆಂದರೆ ಸ್ವಾತಂತ್ರ್ಯ ಬೇಕಾದದ್ದು ಅವರ

ಸಲುವಾಗಿಯೇ ಹೆಚ್ಚು. ಸ್ವಾತಂತ್ರ್ಯವು ಗುಣವಂತರು ಇಲ್ಲವೇ ಸುಶಿಕ್ಷಿತ ಜನರಿಗಷ್ಟೇ ಸಂಬಂಧಿಸಿದ ವಸ್ತುವಲ್ಲ. ಅವರೂ ಜನತೆಯೂ ತಮ್ಮ ತಮ್ಮ ಸಂಕುಚಿತ ಸ್ವಾರ್ಥಗಳನ್ನು ಸ್ವಾತಂತ್ರ್ಯ ಸಾಧನೆಗಾಗಿ ಒಟ್ಟುಗೂಡಿಸಿ, ಸಾಕಷ್ಟು ಸಂಯಮ-ದಿಂದಲೂ ಶಿಸ್ತಿನಿಂದಲೂ ಬೆರೆತು, ಸ್ವ-ಹಿತವನ್ನು ಕಡೆಗಣಿಸಿ, ತಮ್ಮ ಶೋಷಣೆಯಲ್ಲೇ ತೊಡಗಿರುವ ಸರಕಾರದ ವಿರುದ್ಧ ಕರನಿರಾಕರಣ ಚಳವಳಿ ಹೂಡುವಂತಾಗಬೇಕು.

(ಯ. ಇ. ೧೯೨೧)

# ಯುದ್ಧದಿಂದ ಸ್ವಾತಂತ್ರ್ಯ ಅಶಕ್ಯ

ಹಿಂಸಾತ್ಮಕ ಕ್ರಾಂತಿಯ ದಾರಿಯಿಂದ ಭಾರತದ ಸ್ವಾತಂತ್ರ್ಯವು ಶಕ್ಯವಿಲ್ಲ ಎಂದು ನಾನು ಸಾರುತ್ತೇನೆ. ಪ್ರತ್ಯಕ್ಷ ಯುದ್ಧವು ಸಾಧ್ಯವೆನಿಸಿದಲ್ಲಿ, ಯುದ್ಧಭೂಮಿಯಲ್ಲಿ ಇತರ ರಾಷ್ಟ್ರ-ಗಳು ತೋರಿಸಿದಂತೆ, ಧೈರ್ಯಪ್ರದರ್ಶನ ಮಾಡುವುದನ್ನಾದರೂ ನಾನು ಸಹಿಸಿಕೊಳ್ಳಬಲ್ಲೆನು. ಆದರೆ, ಯುದ್ಧದ ಮೂಲಕವಾಗಿ ಸದ್ಯಕ್ಕಾಗಲೀ, ಮುಂದಾಗಲೀ, ಭಾರತವು ಸ್ವಾತಂತ್ರ್ಯವನ್ನು ಪಡೆಯುವುದು ಸರ್ವಥಾ ಸಾಧ್ಯವಿಲ್ಲ. ಯುದ್ಧದಿಂದ ಇಂಗ್ಲಿಷರ ಆಳಿಕೆಯ ಬದಲು ಮತ್ತೊಂದು ಆಳಿಕೆ ಬಂದೀತೇ ಹೊರತು ಜನರು ತಮ್ಮನ್ನು ತಾವೇ ಆಳಿಕೊಳ್ಳುವ ಸ್ವಾತಂತ್ರ್ಯವು ಬರಲಾರದು.

(ಯ. ಇ. ೧೯೨೪)

## ಸ್ವಾತಂತ್ರ್ಯದ ಅಸ್ತ್ರ-ಸತ್ಯಾಗ್ರಹ

ಭಾರತವು ತನ್ನ ಸುಲಿಗೆಗಾರರ ಹಿಂಸೆಯಿಂದ ಬಂಧನದಲ್ಲಿರುವುದಕ್ಕಿಂತ ಹಿಂಸಾಮಾರ್ಗದಿಂದಾದರೂ ಸ್ವತಂತ್ರವಾಗುವುದೇ ನನಗೆ ಬೇಕು. ಆದರೆ ಇದೊಂದು ತೀರ ಅಸಂಭವನೀಯವಾದ ಯೋಚನೆಯೇ ಸರಿ. ಏಕೆಂದರೆ, ಪ್ರೇಮ ಮತ್ತು ಸತ್ಯಾಗ್ರಹಗಳೆಂಬ ಆತ್ಮಶಕ್ತಿಯ ಆಯುಧಗಳ ಮೂಲಕವಾಗಿಯಲ್ಲದೆ ಬೇರೆ ಯಾವುದರಿಂದಲೂ ಭಾರತದ ಸ್ವಾತಂತ್ರ್ಯವು ದೊರೆಯಲಾರದು.

(ಮಹಾತ್ಮರ ಮಹಾವಿಚಾರಗಳು)

## ಶಾಸನ ಸಭೆಗಳಿಂದ ಸ್ವಾತಂತ್ರ್ಯ ಸಿದ್ಧಿಸದು

ಶಾಸನ ಸಭೆಗಳು ದಿಟ್ಟತನದ ಹೃದಯವನ್ನು ತಯಾರಿಸಿಕೊಡುವ ಕಾರಖಾನೆಗಳಲ್ಲ ದಿಟ್ಟಹೃದಯಗಳಿಲ್ಲದೆ ಸ್ವಾತಂತ್ರ್ಯವನ್ನು ಪಡೆದುಕೊಳ್ಳುವುದೆಂಬುದು ಭ್ರಮೆಯೇ ಸರಿ.

(ಮಹಾತ್ಮರ ಮಹಾವಿಚಾರಗಳು)

---

# ಸ್ವಾತಂತ್ರ್ಯದ ಪೂಜಾ ಪೀಠ

ಶುದ್ಧ ಹೃದಯ ಮತ್ತು ಶುದ್ಧ ಹಸ್ತಗಳಿಲ್ಲದ ಯಾವನೂ ಸ್ವಾತಂತ್ರ್ಯದೇವತೆಯ. ಪೂಜಾ ಪೀಠದ ಹತ್ತಿರ ಹೋಗಲಾರನು.

(ಮಹಾತ್ಮರ ಮಹಾವಿಚಾರಗಳು)

# ಬಲಾತ್ಕಾರದ ಸ್ವಾತಂತ್ರ್ಯ

ಸ್ವಾತಂತ್ರ್ಯವೂ ಕೂಡಾ ಬಲಾತ್ಕಾರದಿಂದ ಹೇರಲ್ಪಡ-ಬಾರದು. ಅತ್ಯಂತ ನಿರಂಕುಶವಾಗಿ ನಡೆದುಕೊಳ್ಳುವ ಮಂತ್ರಿಯು ಜನತೆಯ ಇಚ್ಛೆಗೆ ತಲೆಬಾಗತಕ್ಕದ್ದು. ಇಲ್ಲವೆ, ಅಧಿಕಾರಕ್ಕೆ ಶರಣುಹೊಡೆಯತಕ್ಕದ್ದು—ಇದೇ ಪ್ರಜಾಸತ್ತೆಯ ಜೀವಾಳ.

(ಮಹಾತ್ಮರ ಮಹಾವಿಚಾರಗಳು)

# ದಬ್ಬಾಳಿಕೆಯ ಧಿಕ್ಕಾರವೇ ಸ್ವಾತಂತ್ರ್ಯದ ಮೂಲ

ಇದುವರೆಗೆ ಯಾವ ಸರಕಾರದ ಕೆಳಗೆ ಬದುಕುತ್ತಿದ್ದೆವೋ ಅದನ್ನು ಧಿಕ್ಕರಿಸಿದಾಗಲೇ ಸ್ವತಂತ್ರ ಸರಕಾರವು ಸ್ಥಾಪನೆ-ಯಾದಂತೆ.

(ಮಹಾತ್ಮರ ಮಹಾವಿಚಾರಗಳು)

## ಸೆರೆಮನೆಯು ಸ್ವಾತಂತ್ರ್ಯದ ದೇವಾಲಯು

ಕೇಡಿಗಳಿಗೆ ಸೆರೆಮನೆಗಳು ಸ್ವಾತಂತ್ರ್ಯದ ಹೆಬ್ಬಾಗಿಲಾಗುವುದಿಲ್ಲ ನಿಷ್ಕಳಂಕತೆಯ ಸಾಕಾರ ಮೂರ್ತಿಗಳಾದವರಿಗೆ ಸೆರೆಮನೆಗಳು ಸ್ವಾತಂತ್ರ್ಯದ ದೇವಾಲಯುಗಳಾಗಿರುತ್ತವೆ.

(ಮಹಾತ್ಮರ ಮಹಾವಿಚಾರಗಳು)

## ಸ್ವಾತಂತ್ರ್ಯವು ಸುಲಭ ಗಮ್ಯವಲ್ಲ

ಸ್ವಾತಂತ್ರ್ಯವು ಮೆಚ್ಚಿಸಿ, ಸಂತೋಷ ಪಡಿಸಲಿಕ್ಕೆ ಕಠಿನವಾಗಿರುವ ಮೋಹಿನಿಯಾಗಿದ್ದಾಳೆ. ನಾವೇನೋ ಕಷ್ಟಸಹಿಷ್ಣುತೆಯಲ್ಲಿರುವ ಶಕ್ತಿಯನ್ನು ತೋರಿಸಿಕೊಟ್ಟಿದ್ದೇವೆ. ಆದರೂ ನಾವು ಇನ್ನೂ ಸಾಕಷ್ಟು ಕಷ್ಟಪಟ್ಟಂತೆ ತೋರುವುದಿಲ್ಲ.

(ಮಹಾತ್ಮರ ಮಹಾವಿಚಾರಗಳು)

## ಪಾಶವೀಶಕ್ತಿಯು ನಮ್ಮ ಸ್ವಾತಂತ್ರ್ಯಕ್ಕೆ ಸಲ್ಲದು

ಅನ್ಯ ರಾಷ್ಟ್ರಗಳಲ್ಲಿ ಸರಕಾರಗಳು ಪಾಶವೀ ಶಕ್ತಿಯಿಂದಲೇ ಕೆಳಗುರುಳಿಸಲ್ಪಟ್ಟಿವೆ. ಆದರೆ ಭಾರತವು ಆ ಶಕ್ತಿಯ ಮೂಲಕವಾಗಿ ಸ್ವಾತಂತ್ರ್ಯವನ್ನು ಪಡೆಯಲಾರದೆಂಬುದನ್ನು ಆಗಾಗ ಸ್ಪಷ್ಟಪಡಿಸಿ ತೋರಿಸಿದ್ದೇನೆ.

(ಮಹಾತ್ಮರ ಮಹಾವಿಚಾರಗಳು)

---

## ಸ್ವಾತಂತ್ರ್ಯದ ದ್ವಾರ

ಕಾರಾಗೃಹದ ದ್ವಾರವು ಸ್ವಾತಂತ್ರ್ಯದ ದ್ವಾರವಾಗಿದೆ. ಸರಕಾರದ ಸೆರೆಮನೆಗಳಲ್ಲಿ ಯಾತನೆ ಅನುಭವಿಸುವವರ ಬಗೆಗೆ ನನಗೆ ಪಶ್ಚಾತ್ತಾಪವಾಗುವದಿಲ್ಲ. ದುಷ್ಟ ಸರಕಾರದ ಆಳಿಕೆಯಲ್ಲಿ ನಿರಪರಾಧಿಗಳಾದವರು ಗಲ್ಲಿಗೇರಿಸಲ್ಪಟ್ಟಾಗ ಸಂತೋಷವನ್ನೇ ಪಡಬೇಕು.

(ಮಹಾತ್ಮರ ಮಹಾವಿಚಾರಗಳು)

## ಜನಶಕ್ತಿಯಿಂದ ಸ್ವಾತಂತ್ರ್ಯ

ಶಸ್ತ್ರಪ್ರದರ್ಶನವೇ ಅತ್ಯುತ್ತಮ ಪ್ರಚಾರವೆನಿಸುವುದಾದರೆ, ಸೆರೆಮನೆಯ ಶಿಕ್ಷೆಯನ್ನು ಅನುಭವಿಸಿದಂತೆಲ್ಲ ಜನತೆಯ ಶಕ್ತಿಯು ಹೆಚ್ಚುತ್ತ ಹೋಗಿ, ಅದರಿಂದ ಸ್ವಾತಂತ್ರ್ಯವು ಸಮೀಪಕ್ಕೆ ಬರುವಂತಾಗುವುದು.

(ಮಹಾತ್ಮರ ಮಹಾವಿಚಾರಗಳು)

## ಹೇಡಿತನಕ್ಕೆ ಸ್ವಾತಂತ್ರ್ಯವಿಲ್ಲ

ಅನ್ಯಾಯವಾದ ಕಾಯಿದೆಗಳಿಗೆ ತಲೆಬಗ್ಗಿ ನಡೆಯುವುದು ಹೇಡಿತನ ಎಂಬುದನ್ನು ಮನುಷ್ಯನು ಯಾವಾಗ ತಿಳಿಯುತ್ತಾನೋ ಆಗಲೇ ಆತನು ಮನುಷ್ಯಕೃತ ಗುಲಾಮಗಿರಿಯಿಂದ

ಸ್ವತಂತ್ರನಾದನೆಂದು ತಿಳಿಯಬೇಕು. ಇದೇ ಸ್ವಾತಂತ್ರ್ಯದ ಲೀಲೆಯ ಸೈ.

(ಮಹಾತ್ಮರ ಮಹಾವಿಚಾರಗಳು)

## ಸ್ವಾತಂತ್ರ್ಯಕ್ಕೆ ಅಸ್ಪೃಶ್ಯತಾ ನಿವಾರಣೆ ಗೌಣವಲ್ಲ

ಅಸ್ಪೃಶ್ಯತೆಗೆ ವಿಧಾಯಕ ಕಾರ್ಯಕ್ರಮದಲ್ಲಿ ಗೌಣಸ್ಥಾನವನ್ನು ಕೊಡಕೂಡದು. ಈ ಕಲಂಕವನ್ನು ತೊಡೆದುಹಾಕದ ಸ್ವಾತಂತ್ರ್ಯವು ಅರ್ಥರಹಿತವಾಗುವುದು. ಈ ಕಾರ್ಯದಲ್ಲಿ ತೊಡಗಿದ ಕಾರ್ಯಕರ್ತರು ಸಾಮಾಜಿಕ ಬಹಿಷ್ಕಾರವನ್ನೂ, ತಿರಸ್ಕಾರವನ್ನೂ ಸ್ವಾಗತಿಸಬೇಕು.

(ಮಹಾತ್ಮರ ಮಹಾವಿಚಾರಗಳು)

## ಚರಖದ ಸುತ್ತಿನಲ್ಲಿದೆ ಸ್ವಾತಂತ್ರ್ಯ

ಚರಖದ ಪ್ರತಿಯೊಂದು ಸುತ್ತೂ ಶಾಂತಿ, ಸದ್ಭಾವನೆ ಮತ್ತು ಪ್ರೇಮವನ್ನು ನೂಲುತ್ತದೆ. ಹಾಗೆ ಮಾಡದ ಪ್ರತಿಯೊಂದು ಸುತ್ತೂ ಭಾರತದ ಗುಲಾಮಗಿರಿಯನ್ನು ಮತ್ತಷ್ಟು ಭದ್ರಪಡಿಸುವುದು. ಚರಖ ಮತ್ತು ಅದರಲ್ಲಿ ಹುದುಗಿರುವ ತತ್ತ್ವದ ಪುನರುಜ್ಜೀವನವೇ ಭಾರತದ ಸ್ವಾತಂತ್ರ್ಯ.

(ಮಹಾತ್ಮರ ಮಹಾವಿಚಾರಗಳು)

# ಆರ್ಥಿಕಸ್ವಾತಂತ್ರ್ಯವೇ ರಾಜಕೀಯ ಸ್ವಾತಂತ್ರ್ಯ

ಭಾರತದ ಆರ್ಥಿಕ ಪರಿಸ್ಥಿತಿಯನ್ನು ಅಭ್ಯಾಸಮಾಡಿದಂತೆಲ್ಲ, ಹಾಗೂ ಗಿರಣಿ ಮಾಲಕರ ಮಾತುಗಳನ್ನು ಕೇಳಿದಂತೆಲ್ಲ, ಚರಖದ ಮಹತ್ವವು ಹೆಚ್ಚೆಚ್ಚು ಮನದಟ್ಟಾಗುತ್ತದೆ. ಭಾರತದ ಪ್ರತಿಯೊಂದು ಮನೆಯಲ್ಲಿಯೂ ಚರಖವು ತಲೆಎತ್ತುವುದರಿಂದಲೇ ಭಾರತದ ಆರ್ಥಿಕ ಸ್ವಾತಂತ್ರ್ಯವೂ ರಾಜಕೀಯ ಸ್ವಾತಂತ್ರ್ಯವೂ ದೊರೆಯುತ್ತವವೆಂದು ನಾನು ಖಚಿತ ಮಾಡಿಕೊಂಡಿದ್ದೇನೆ.

(ಮಹಾತ್ಮರ ಮಹಾವಿಚಾರಗಳು)

---

# ಚರಖಾ ಕಾಮಧೇನುವಿನಿಂದ ಸ್ವಾತಂತ್ರ್ಯ

ಅಹಿಂಸೆಯನ್ನು ಬಿಟ್ಟು ಬೇರಾವ ದಾರಿಯೂ ಭಾರತಕ್ಕೆ ಸರಿಹೋಗುವುದಿಲ್ಲವೆಂದು ನಾನು ನಂಬಿದ್ದೇನೆ. ಅಹಿಂಸಾ ಧರ್ಮಕ್ಕೆ, ನಿರ್ಗತಿಕರ ಸ್ನೇಹಿತನೂ, ದರಿದ್ರರ ಕಾಮಧೇನುವೂ ಆದ ಚರಖವೇ ಪ್ರತೀಕವಾಗಿದೆ. ಪ್ರೇಮತತ್ತ್ವಕ್ಕೆ ಸ್ಥಳ, ಕಾಲಗಳ ಗಡಿಗಳಿಲ್ಲ. ಆದ್ದರಿಂದ ನಾನು ಚಿತ್ರಿಸಿಕೊಂಡಿರುವ 'ಸ್ವಾತಂತ್ರ್ಯ'ದಲ್ಲಿ ಭಂಗಿಗಳಿಗೂ ಹೊಲೆಯರಿಗೂ ಸ್ಥಾನವಿದೆ. ಏಕೆಂದರೆ, ಅವರೆಲ್ಲರಿಗೂ ಚರಖಕ್ಕಿಂತ ಬೇರೆ ಸ್ನೇಹಿತನನ್ನು ನಾನು ಕಾಣದಾಗಿದ್ದೇನೆ.

(ದಿ ಮೈಂಡ್ ಆಫ್ ಗಾಂಧಿ)

---

# ಸ್ವಾತಂತ್ರ್ಯ ಮತ್ತು ವಸ್ತುವಿನಿಮಯ

ನನ್ನ ಕಲ್ಪನೆಯ ಸ್ವಾತಂತ್ರ್ಯದಲ್ಲಿ ದುಡಿತವೇ ಚಲಾವಣೆಯ ನಾಣ್ಯವಾಗುವುದು. ಯಾವನು ದುಡಿಯಬಲ್ಲನೋ ಅವನಲ್ಲಿ ಆ ನಾಣ್ಯವಿರುತ್ತದೆ, ಸಂಪತ್ತಿರುತ್ತದೆ. ಆತನು ತನ್ನ ದುಡಿತವನ್ನು ಬಟ್ಟೆಗೆ ರೂಪಾಂತರಿಸಿಕೊಳ್ಳುತ್ತಾನೆ, ಕಾಳುಕಡಿಗೆ ರೂಪಾಂತರಿಸಿಕೊಳ್ಳುತ್ತಾನೆ. ಪ್ಯಾರಾಫಿನ್ ಎಣ್ಣೆಯು ಆತನಿಗೆ ಬೇಕಾದರೆ, ಹಾಗೂ ಅದನ್ನಾತನು ತಯಾರಿಸಿಕೊಳ್ಳಲಾರನಾದರೆ, ಆತನು ತನ್ನಲ್ಲಿ ಮಿಕ್ಕಿರುವ ದವಸಧಾನ್ಯವನ್ನು ಕೊಟ್ಟು ಆ ಎಣ್ಣೆಯನ್ನು ಪಡೆಯುತ್ತಾನೆ. ಅದೊಂದು ನ್ಯಾಯವಾದ ಮತ್ತು ಸ್ವತಂತ್ರವಾದ ವಿನಿಮಯ ಪದ್ಧತಿಯಾಗಿದ್ದು, ಒಂದು ವಸ್ತುವಿನ ಬೆಲೆಗೆ ಸಮಾನವಾದ ಮತ್ತೊಂದು ವಸ್ತುವನ್ನು ಪಡೆಯುವುದು. ಇದರಿಂದ, ಪ್ರಾಚೀನ ಕಾಲದ ಕಾಡುಮನುಷ್ಯರ ಪದ್ಧತಿಯನ್ನು ಪುನಃ ಜಾರಿಗೆ ತಂದಂತಾಗುವುದೆಂದು ಹೇಳಬಹುದು. ಆದರೆ, ಈಗ ನಡೆಯುತ್ತಿರುವ ಅಂತರರಾಷ್ಟ್ರೀಯ ವ್ಯಾಪಾರವೆಲ್ಲವೂ ವಸ್ತುವಿನಿಮಯದಿಂದಲೇ ನಡೆಯುತ್ತದಲ್ಲವೆ ?

(ದಿ ಮೈಂಡ್ ಆಫ್ ಗಾಂಧಿ)

---

# ಸ್ವಾತಂತ್ರ್ಯ ಮತ್ತು ಯಂತ್ರೋಪಕರಣ

ನನ್ನ 'ಸ್ವಾತಂತ್ರ್ಯ'ದಲ್ಲಿ ಯಂತ್ರೋಪಕರಣಗಳಿಗೆ ಸ್ಥಾನವಿಲ್ಲೆಂದಿಲ್ಲ; ಅವುಗಳೂ ಬಳಕೆಗೆ ಬಂದು ಬಿಟ್ಟಿವೆ. ಆದರೆ, ಅವು ದೇಹಶ್ರಮವನ್ನು ಆಕ್ರಮಿಸಬಾರದು, ಅಷ್ಟೆ. ಹಳ್ಳಿಯ ಜೀವನದ ಯಂತ್ರೋಪಕರಣಗಳನ್ನು ಈಗಿನಕಿಂತ ಚೆನ್ನಾಗಿ

ಆಗುವಂತೆ ಸುಧಾರಿಸುವುದನ್ನು ನಾನು ಸ್ವಾಗತಿಸುತ್ತೇನೆ. ಆದರೆ, ಕೈಯಿಂದ ಮಾಡಬಹುದಾದಂತಹ ಕಾರ್ಯಗಳಿಗೆ, ಯಂತ್ರೋಪಕರಣಗಳನ್ನು ಉಪಯೋಗಿಸುವುದನ್ನು ನಾವು ವಿರೋಧಿಸುತ್ತೇನೆ. ಉದಾಹರಣೆಗೆ, ಚರಖಾ ಮತ್ತು ಮಗ್ಗದ ಉದ್ದಿಮೆಯಲ್ಲಿ, ವಿದ್ಯುಚ್ಛಕ್ತಿಯನ್ನು ಉಪಯೋಗಿಸಕೂಡದು. ಅದನ್ನು ಉಪಯೋಗಿಸುವುದಾದರೆ, ಲಕ್ಷಾಂತರ ಒಕ್ಕಲಿಗರಿಗೆ ಬೇರೊಂದು ಉಪಜೀವನವನ್ನು ಮಾಡಿಕೊಡಬೇಕಾಗುವುದು.

(ದಿ ಮೈಂಡ್ ಆಫ್ ಗಾಂಧಿ)

× × ×

ನಿರ್ಜೀವವಾದ ಯಂತ್ರಗಳನ್ನು ಲಕ್ಷಾಂತರ ಸಜೀವ ಮಾನವ ಯಂತ್ರಗಳ ವಿರುದ್ಧವಾಗಿ ಎತ್ತಿಕಟ್ಟಬಾರದು. ಈ ಮಾನವ ಯಂತ್ರಗಳೇ ನಮ್ಮ ೭ ಲಕ್ಷ ಗ್ರಾಮಗಳ ಜೀವಾಳ-ವಾಗಿ ಹರಡಿಕೊಂಡಿವೆ. ಯಂತ್ರಸಲಕರಣೆಗಳು ಉಪಯುಕ್ತ-ವಾಗಬೇಕಾದರೆ, ಅವುಗಳು ಮನುಷ್ಯ ಶ್ರಮಕ್ಕೆ ಸಹಾಯಕವಾಗಿ ಅದನ್ನು ಹಗುರುಗೊಳಿಸಿಕೊಡುವಂತಿರಬೇಕು. ಯಂತ್ರೋಪ-ಕರಣಗಳ ಈಗಿನ ಉಪಯೋಗ ಪದ್ಧತಿಯಿಂದ ಲಕ್ಷಾಂತರ ಬಡ ಸ್ತ್ರೀಪುರುಷರ ತುತ್ತು ಕಸಿಯಲ್ಪಟ್ಟಂತಾಗಿದ್ದು, ಕೆಲವೇ ಜನರ ಕೈಯಲ್ಲಿ ಸಂಪತ್ತಿನ ಕೇಂದ್ರೀಕರಣ ಮಾಡಿದಂತಾಗಿ ಬಿಟ್ಟಿದೆ.

(ದಿ ಮೈಂಡ್ ಆಫ್ ಗಾಂಧಿ)

## ಸ್ವಾತಂತ್ರ್ಯ ಮತ್ತು ಸಮಾನತೆ

ಸಮಾಜ ರಚನೆಯ ಕುರಿತು ನನಗಿರುವ ಅಭಿಪ್ರಾಯ-ದಂತೆ, ಎಲ್ಲ ವ್ಯಕ್ತಿಗಳೂ ಜನ್ಮತಃ ಸಮಾನತೆಯುಳ್ಳವರಾಗಿರು-

ತ್ತಾರೆ. ಅಂದರೆ, ಎಲ್ಲರಿಗೂ ಸಮಾನಾವಕಾಶವಿರುತ್ತದಾದರೂ ಎಲ್ಲರ ಶಕ್ತಿ-ಅಭಿರುಚಿಗಳೂ ಒಂದೇ ತೆರವಾಗಿರುವದಿಲ್ಲ. ಅಂತಹ ಸಮಾನತೆಯು ನಿಸರ್ಗದಲ್ಲೇ ಇರುವದಿಲ್ಲ. ಉದಾಹರಣೆಗೆ— ಎಲ್ಲರೂ ಒಂದೇ ಉದ್ದಳತೆ, ಬಣ್ಣ, ಬುದ್ಧಿಮತ್ತೆ ಉಳ್ಳವ- ರಾಗಿರುವದಿಲ್ಲ. ಆದ್ದರಿಂದ ಕೆಲವರು ಹೆಚ್ಚುಗಳಿಸುವುದೂ, ಮತ್ತೆ ಕೆಲವರು ಕಡಿಮೆ ಗಳಿಸುವುದೂ ಸ್ವಾಭಾವಿಕವೇ ಆಗಿದೆ. ಬುದ್ಧಿವಂತರಾದವರು ಹೆಚ್ಚುಗಳಿಸುತ್ತಾರೆ, ಹಾಗೂ ಅದ- ಕ್ಕಾಗಿಯೇ ತಮ್ಮ ಬುದ್ಧಿಮತ್ತೆಯನ್ನು ವಿನಿಯೋಗಿಸುತ್ತಾರೆ. ಅಂತಹ, ಹೆಚ್ಚು ಗಳಿಸುವ ಸಾಮರ್ಥ್ಯವುಳ್ಳವರು ತಮ್ಮ ಹೆಚ್ಚಿನ ಗಳಿಕೆಗೆ 'ಧರ್ಮದರ್ಶಿ'ಗಳಾಗಿರುತ್ತಾರೆ. ಬುದ್ಧಿಶಾಲಿಯಾದವನು ಹೆಚ್ಚು ಗಳಿಸಬೇಕು. ಆತನ ಬುದ್ಧಿಮತ್ತೆಯನ್ನು ನಾನು ಕುಗ್ಗಿಸ- ಲಾರೆನು. ಆದರೆ, ಆತನು ತನ್ನ ಸಂಪತ್ತನ್ನೆಲ್ಲ ಎಲ್ಲ ಮಕ್ಕಳ ಸಂಪಾದನೆಯೂ ಇಡೀ ಕುಟುಂಬದ ಉಪಯೋಗಕ್ಕಾಗಿ ತಂದೆಯ ಕೈಸೇರುವ ಹಾಗೆ ಇಡೀ ದೇಶದ ಹಿತಕ್ಕಾಗಿ ಉಪಯೋಗಿಸಬೇಕು. ಆದ್ದರಿಂದ ಅವರ ಗಳಿಕೆಗಳೆಲ್ಲವೂ 'ಧರ್ಮನಿಧಿ'ಯಾಗಿರುತ್ತದೆ. ಈ ಗುರಿಯ ಸಾಧನೆಯಲ್ಲಿ ನಾನು ಅಪಜಯ ಹೊಂದಬಹುದು. ಆದರೂ, ಅದರ ಕಡೆಗೇ ಸಾನು ಸಾಗುತ್ತಿದ್ದೇನೆ.

## ಸ್ವಾತಂತ್ರ್ಯ-ಸಂಪದುತ್ಪಾದನೆ

ಈಗ ಯಾರು ಸಂಪತ್ತಿನ ಒಡೆಯರಾಗಿರುವರೋ ಅವರಿ- ಗೆಲ್ಲ ನನ್ನ ಆಮಂತ್ರಣ ಹೀಗಿದೆ— ನೀವು ಈ ಸಂಪತ್ತನ್ನು ಗಳಿಸಿರುವಿರಾದರೂ ಅದರ ಒಡೆತನ ನಿಮ್ಮದಲ್ಲ. ಯಾವ

ಜನತೆಯನ್ನು ನೀವು ಶೋಷಿಸಿ ಗಳಿಸಿರುವಿರೋ ಅದು ಆ ಜನತೆಯದು. ನೀವು ಅದರ ಧರ್ಮದರ್ಶಿಗಳಷ್ಟೆ.

× × ×

ಕಾರ್ಮಿಕರಿಗೆ ತಮ್ಮ ಶಕ್ತಿ–ಗೌರವಗಳ ಅರಿವಾದೊಡನೆಯೇ ಹಣವು ತನ್ನ ನಿಜವಾದ ಸ್ಥಾನವನ್ನು ಕಂಡುಕೊಳ್ಳುವುದು. ಅಂದರೆ, ಅದು ಕಾರ್ಮಿಕರಿಗಾಗಿಯೇ ಉಪಯೋಗಿಸಲ್ಪಡುವ 'ವಿಶ್ವಸ್ಥ ನಿಧಿ'ಯಾಗಿ ಉಳಿಯುವುದು. ಏಕೆಂದರೆ, ಶ್ರಮವು ಹಣಕ್ಕಿಂತ ಹೆಚ್ಚಿನದಲ್ಲವೆ ?

(ದಿ ಮೈಂಡ್ ಆಫ್ ಗಾಂಧಿ)

---

## ಸ್ವಾತಂತ್ರ್ಯ ಮತ್ತು ಖಾಸಗಿ ಸಂಪತ್ತು

ಖಾಸಗಿ ಸಂಪತ್ತನ್ನು ಕಸಿಯಬೇಕೆಂಬುದು ನಾನು ಆಶಿಸುವ ಸ್ವಾತಂತ್ರ್ಯವಲ್ಲ. ಆದರೆ, ಆ ಖಾಸಗಿ ಸಂಪತ್ತಿನ ಉಪಭೋಗವನ್ನು ನಿಯಂತ್ರಣದಲ್ಲಿಡುವುದೇ ನನ್ನ ಉದ್ದೇಶವಾಗಿದೆ. ದಾರಿದ್ರ್ಯವು ನಿರ್ಮೂಲವಾಗಬೇಕು, ಹಾಗೂ ಶ್ರೀಮಂತ ಮತ್ತು ದರಿದ್ರರ ನಡುವಿನ ಈಗಿರುವ ದೊಡ್ಡ ಅಂತರವು ಕಡಿಮೆಯಾಗುವಂತೆ, ಧನಿಕರ ಖಾಸಗಿ ಸಂಪತ್ತಿನ ಉಪಯೋಗವಾಗಬೇಕು ಒಡೆಯರ ಸಂಪತ್ತು ಬೆಳೆಯಲಿಕ್ಕೆ ತಮ್ಮ ಶ್ರಮವೇ ಕಾರಣವಾಗಿರುವುದರಿಂದ ಆ ಸಂಪತ್ತಿಗೆ ತಾವು ಭಾಗೀದಾರರು ಎಂದು ಆ ಬಡ ಜನರು ಅಭಿಮಾನಪಡುವಂತಾಗಬೇಕು.

(ದಿ ಮೈಂಡ್ ಆಫ್ ಗಾಂಧಿ)

---

# ಸ್ವಾತಂತ್ರ್ಯ ಮತ್ತು ಕಮ್ಯುನಿಸಮ್

ನನ್ನ ಯಾವ ಕೃತಿಯೂ ಕಾರ್ಮಿಕರಿಗೆ ಎಂದೂ ಹಾನಿ-ಮಾಡಿಲ್ಲ, ಮತ್ತು ಮಾಡುವಂತಹದೂ ಅಲ್ಲವೆಂದು ನಾನು ಸಾರುತ್ತೇನೆ. ಕಾರ್ಮಿಕರಿಗೆ ಮತ್ತು ಒಕ್ಕಲಿಗರಿಗೆ ಸ್ವಾತಂತ್ರ್ಯ-ವನ್ನು ಕೊಡದ ಸ್ವಾತಂತ್ರ್ಯವು, ಸ್ವಾತಂತ್ರ್ಯವೇ ಅಲ್ಲ—ಎಂಬು ದಾಗಿ ಕಮ್ಯುನಿಷ್ಟಪಕ್ಷವು ಹುಟ್ಟುವ ಮೊದಲೇ ಕಾಂಗ್ರೆಸ್ಸು ನಿರ್ಣಯ ಮಾಡಿಕೊಂಡಿರುತ್ತದೆ. ಇಲ್ಲಿರುವ ಯಾವ ಕೆಲಸ-ಗಾರನೂ ತಿಂಗಳಿಗೆ ೨೦ ರೂಪಾಯಿಗಿಂತ ಕಡಿಮೆ ಪಗಾರ ಪಡೆಯುತ್ತಿರುವದಿಲ್ಲವಷ್ಟೇ! ಆದರೆ ನಾನು ನಿಮಗಷ್ಟೇ ಅಲ್ಲದೆ, ನಿಮ್ಮಂತೆಯೇ ದುಡಿಯುತ್ತಿರುವ ಲಕ್ಷಾಂತರ ಜನರ ಸ್ವರಾಜ್ಯ-ಕ್ಕಾಗಿಯೂ ದುಡಿಯುತ್ತಿರುವೆನು. ಆ ಜನರು ನಿರುದ್ಯೋಗ-ದಿಂದಾಗಿ, ದಿನಕ್ಕೆ ಒಂದೂಟ, ಒಂದು ತುಣುಕು ರೊಟ್ಟಿಯಿಂದ, ಅರೆಹೊಟ್ಟೆ ಉಂಡು ಜೀವಿಸುತ್ತಿದ್ದಾರೆ.

(ಯ. ಇ. ೧೯೩೧)

× × ×

ಕಮ್ಯುನಿಝುಮ್ಮು ಸಾಧಿಸಬಯಸುವುದಾದರೂ ಏನನ್ನು? ಅದು ಬಯಸುವುದು ವರ್ಗರಹಿತ ಸಮಾಜ ರಚನೆ—ಅದೊಂದು ಸಾಧಿಸಲು ಯೋಗ್ಯವಾದ ಆದರ್ಶವೇ ಸರಿ. ಆದರೆ, ಆ ಆದರ್ಶವನ್ನು ಹಿಂಸೆಯಿಂದ ಸಾಧಿಸಬೇಕೆಂಬುದೇ ಅವರ ವಾದ-ವಾದ್ದರಿಂದ, ನನ್ನ ದಾರಿ ಬೇರೆಯಾಗಿದೆ. ನಾವೆಲ್ಲರೂ ಜನ್ಮತಃ ಸರಿಸಮಾನರೇ. ಆದರೆ ಅನೇಕ ಶತಮಾನಗಳಿಂದಲೂ ನಾವು ದೇವರ ಇಚ್ಛೆಯನ್ನು ವಿರೋಧಿಸುತ್ತ ಬಂದಿದ್ದೇವೆ. ಮೇಲು-ಕೀಳೆಂಬ ಭಾವನೆಯು ಒಂದು ಅನಿಷ್ಟ. ಆದರೆ, ಬಂದೂಕನ್ನು

ತೋರಿ, ಮನುಷ್ಯ ಹೃದಯದ ಆ ಭಾವನೆಯನ್ನು ಅಳಿಸಬರುವ್ರು-ದೆಂದು ನಾನು ನಂಬುವುದಿಲ್ಲ. ಮನುಷ್ಯಹೃದಯವು ಆ ಕ್ರಮಕ್ಕೆ ಬೆಂಬಲಕೊಡುವುದಿಲ್ಲ.

(ಹ. ೧೯೩೭)

---

## ಕಾರ್ಮಿಕರು ಮತ್ತು ಜಾತೀಯತೆ

ಕೆಲಸಗಾರರಲ್ಲಿ ಜಾತೀಯತಾಭಾವ ಇರಕೂಡದು. ಕೆಲಸಗಾರರು ತಮ್ಮ ಶಕ್ತಿಯನ್ನರಿತುಕೊಂಡು, ಅದನ್ನು ಯೋಗ್ಯವಾಗಿ ಉಪಯೋಗಿಸಿದಲ್ಲಿ ಅವರೇ ಒಡೆಯರೆನಿಸುವರು. ಹಾಗೂ ಒಡೆಯರಾದವರು ಕೆಲಸಗಾರರ ನಿಜವಾದ ಸ್ನೇಹಿತರೂ ಬಂಧುಗಳೂ ಆಗಿ, ತಮ್ಮ ಭಂಡವಳವನ್ನೊಂದು ವಿಶ್ವಸ್ತ ನಿಧಿ ಎಂದು ತಿಳಿಯುವರು. ಕೆಲಸವೇ ನಿಜವಾದ ಭಂಡವಳವೆಂದರಿತು, ಚಿನ್ನ ಬೆಳ್ಳಿಯೂ ಕೂಡಾ ಕೆಲಸಗಾರರ ಶ್ರಮದಿಂದಲೇ ಭೂಗರ್ಭ ದಿಂದ ತೆಗೆಯಲ್ಪಡುತ್ತಿದೆಂದು ತಿಳಿಯುವ ಸುದಿನವು ಯಾವಾಗ ಬರುವುದೊ ?

(ಹ. ೧೯೪೭)

---

## ಸ್ವಾತಂತ್ರ್ಯದ ಸಮವಸ್ತ್ರ ಖಾದಿ

ಖಾದಿಯನ್ನು **ಎತ್ತಿ** ಹಿಡಿಯುವದರಿಂದ ನಾನು "ಸ್ವಾತಂತ್ರ್ಯ"ದ ನೌಕೆಯನ್ನು ಗಾಳಿಗೆ ಇದಿರಾಗಿ ನಡೆಸು-ತ್ತಿರುವೆನೆಂದೂ, ಆದ್ದರಿಂದ ಆ ನೌಕೆಯು ಮುಳುಗಿಹೋಗು-ವುದೆಂದೂ ಅನ್ನುತ್ತಾರೆ....ಖಾದಿಯು ನನಗೆ ಭಾರತೀಯರ

ಐಕ್ಯದ ಚಿಹ್ನೆಯಾಗಿದೆ. ಅದು ಆರ್ಥಿಕ ಸ್ವಾತಂತ್ರ್ಯದ ಹಾಗೂ ಸಮಾನತೆಯ ಚಿಹ್ನೆಯಾಗಿದ್ದು, ಜವಾಹರಲಾಲರು ಕಾವ್ಯಮಯ ಶೈಲಿಯಲ್ಲಿ ಹೇಳಿರುವಂತೆ ಅದು "ಭಾರತ ಸ್ವಾತಂತ್ರ್ಯದ ಯೋಧರ ಸಮವಸ್ತ್ರ"ವಾಗಿದೆ.....ಖಾದಿಯು ಪೂರ್ಣ ಸ್ವದೇಶೀ ಭಾವನೆಯ ಕುರುಹಾಗಿದ್ದು, ಭಾರತದ ಆವಶ್ಯಕತೆಗಳನ್ನೆಲ್ಲ ಭಾರತದೊಳಗೆ, ಹಳ್ಳಿಯ ಕೈಗಾರಿಕೆ, ಕಲಾಕೌಶಲ್ಯದಿಂದಲೇ ಪೂರಯಿಸಿಕೊಳ್ಳುವ ಮನೋನಿರ್ಧಾರದ ಸೂಚನೆಯಾಗಿರುತ್ತದೆ....ಭಾರತದ ದುಃಖತಪ್ತ ಜನತೆಗೆ ಶಕ್ತಿಯನ್ನೂ ಸುಖವನ್ನೂ ಉಂಟುಮಾಡಿಕೊಡುವ ಅಹಿಂಸಾತ್ಮಕ ಸ್ವಾತಂತ್ರ್ಯಕ್ಕೆ ಚರಖವೇ ಸಾಧನವೆಂದು ನಾನು ನಂಬಿದ್ದೇನೆ.

(ಚರಖಾದಿಂದ ಸ್ವಾತಂತ್ರ್ಯ)

---

# ಸ್ವಾತಂತ್ರ್ಯದ ಒಳಗುಟ್ಟು

ಕೈನೂಲಿನ ಕೆಲಸದಲ್ಲಿ ಸ್ತ್ರೀಯರ ಮಾನರಕ್ಷಣೆಯು ಅಡಗಿಕೊಂಡಿದೆ. ಅದು ಕ್ಷಾಮಕ್ಕೊಂದು ಜೀವವಿಮೆ ಹಾಗೂ ಬೆಲೆ ಇಳಿತಕ್ಕೊಂದು ಉಪಾಯ. ಅದರಲ್ಲಿಯೇ ಸ್ವಾತಂತ್ರ್ಯದ ರಹಸ್ಯವು ಹುದುಗಿದೆ. ಕೈನೂಲಿನ ಉದ್ದಿಮೆಯ ಪುನರುಜ್ಜೀವನವೆಂಬುದು ನಮ್ಮ ಪೂರ್ವಜರು ಪರದೇಶೀ ವಸ್ತ್ರ ಒಡವೆಗಳ ಮೋಹಕ್ಕೆ ಬಲಿಬಿದ್ದು ಮಾಡಿದ ಪಾಪವನ್ನು ತೊಳೆದುಕೊಳ್ಳಲು ನಾವು ಮಾಡಬಹುದಾದ ಪುಟ್ಟ ತಪನ್ನಾಗಿದೆ.

(ಯ. ಇ. ೧೯-೨೧)

## ಸ್ವಾತಂತ್ರ್ಯವು ಪ್ರಾಮಾಣಿಕ ಕಾರ್ಯದಲ್ಲಿದೆ

ಪ್ರಾಮಾಣಿಕವಾದ ಕಾರ್ಯದಲ್ಲಿ ನಮ್ಮ ಸ್ವಾತಂತ್ರ್ಯ ಇದೆ. ಅದರಲ್ಲಿಯೇ ನಮ್ಮ ಸಕಲ ಅವಶ್ಯಕತೆಗಳ ಪೂರಯಿ-ಕೆಯೂ ಇದೆ.

(ದಿ ಡೇಬುಕ್ ಆಫ್ ಥಾಟ್ಸ್)

---

## ಸ್ವಾತಂತ್ರ್ಯದ ಗುಲಾಬಿ ಹೂ

ಗುಲಾಬಿ ಹೂವನ್ನು ಯಾವ ಹೆಸರಿಂದ ಕರೆದರೂ ಅದರ ಪರಿಮಳದಲ್ಲಿ ಹೆಚ್ಚುಕಡಿಮೆಯಾಗುವುದಿಲ್ಲ. ಆದರೆ ಅದು ಸ್ವಾತಂತ್ರ್ಯವೆಂಬ ಗುಲಾಬಿ ಹೂವಾಗಿರತಕ್ಕದ್ದು. ಕೃತ್ರಿಮ ಗುಲಾಬಿ ಹೂ ನನಗೆ ಬೇಕಾಗಿಲ್ಲ.

(ದಿ ಡೇಬುಕ್ ಆಫ್ ಥಾಟ್ಸ್)